4) ಉಪಕಾರ್ಯದರ್ಶಿ, ಸದಸ್ಯರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬಹುಮಹಡಿ ಕಟ್ಟಡ, ಬೆಂಗಳೂರು.

5) ಉಪ ನಿರ್ದೇಶಕರು ಸದಸ್ಯ ಕಾರ್ಯದರ್ಶಿ
ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ, ಮೈಸೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1523 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಬಿಜಾಪುರ ಸರ್ಕಾರಿ ವಸ್ತು ಸಂಗ್ರಹಾಲಯದ ಅಸ್ತಿತ್ವದ ಬಗ್ಗೆ.

**ಓದಲಾಗಿದೆ:** 1] ಸರ್ಕಾರಿ ಆದೇಶ ಸಂಖ್ಯೆ: ಸಂಕಇ 89 ಕೆಎಂಯು 2001, ಬೆಂಗಳೂರು ದಿನಾಂಕ: 16.8.2001

2] ನಿರ್ದೇಶಕರ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಇವರ ಪತ್ರ ಕ್ರಮಾಂಕ: ಡಿಎಎಂ:ಎಸಿಟಿ/3 ; ಬಿಜಾಪುರ ವಸ್ತು ಸಂಗ್ರಹಾಲಯ 33/2003-04, ದಿನಾಂಕ:28.2.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರಲ್ಲಿ ಬಿಜಾಪುರ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಲು ಒಟ್ಟು ರೂ.11.00 ಲಕ್ಷ ಅನುದಾನವನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ನಿರ್ದೇಶಕರಿಗೆ ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರು ಬಿಜಾಪುರ ವಸ್ತು ಸಂಗ್ರಹಾಲಯಕ್ಕೆ ಸಂಬಂಧಿಸಿದಂತೆ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ವತಿಯಿಂದ ಬಿಜಾಪುರದಲ್ಲಿ ಒಂದು ವಸ್ತು ಸಂಗ್ರಹಾಲಯವನ್ನು ಸ್ಥಾಪಿಸುವ ಸಲುವಾಗಿ ಒಂದು ಬಾಡಿಗೆ ಕಟ್ಟಡವನ್ನು ಗೊತ್ತು ಮಾಡಿಕೊಂಡು ಪೂರಕ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ. ಸದರಿ ಸಂಗ್ರಹಾಲಯದ ವಾರ್ಷಿಕ ಅಂದಾಜು ವೆಚ್ಚ ರೂ.1,10,000-00 ಆಗುತ್ತದೆ. ಸೂಕ್ತ ಕಟ್ಟಡವಿರುವುದಿಲ್ಲ, ಸಿಬ್ಬಂದಿಯ ಕೊರತೆ ಇದೆ. ಹಾಗೂ ಇಲ್ಲಿನ ಸಂಗ್ರಹ ಉತ್ತಮ ಮಟ್ಟದ್ದಾಗಿರುವುದಿಲ್ಲ. ಆದರೆ ಬಿಜಾಪುರದಲ್ಲಿ ಕೇಂದ್ರ ಸರ್ಕಾರದ ಉತ್ತಮ ದರ್ಜೆಯ ವಸ್ತು ಸಂಗ್ರಹಾಲಯ ಕಾರ್ಯ ನಿರ್ವಹಿಸುತ್ತಿರುವುದರಿಂದ ಬಿಜಾಪುರ ವಸ್ತು ಸಂಗ್ರಹಾಲಯವನ್ನು ರದ್ದುಗೊಳಿಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಕೇಂದ್ರ ಸರ್ಕಾರದ ವಸ್ತು ಸಂಗ್ರಹಾಲಯಗಳು ಇರುವೆಡೆಗಳಲ್ಲಿ ರಾಜ್ಯ ಸರ್ಕಾರದ ವತಿಯಿಂದ ವಸ್ತು ಸಂಗ್ರಹಾಲಯಗಳನ್ನು ನಡೆಸುವುದು ಅನಗತ್ಯವೆಂದು ಸರ್ಕಾರ ತೀರ್ಮಾನಿಸಿದೆ.

ಮೇಲಿನ ಹಿನ್ನಲೆಯಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಕೆಎಂಯು 2004 ಬೆಂಗಳೂರು, ದಿನಾಂಕ: 19ನೇ ನವೆಂಬರ್ 2005**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ಬಿಜಾಪುರದಲ್ಲಿ ಈಗಾಗಲೇ ಕೇಂದ್ರ ಸರ್ಕಾರದ ಉತ್ತಮ ದರ್ಜೆಯ ವಸ್ತು ಸಂಗ್ರಹಾಲಯ ಅಸ್ತಿತ್ವದಲ್ಲಿರುವುದರಿಂದ, ಬಿಜಾಪುರದಲ್ಲಿ ರಾಜ್ಯ ಸರ್ಕಾರದ ಮತ್ತೊಂದು ಸಂಗ್ರಹಾಲಯದ ಅವಶ್ಯಕತೆ ಇರುವುದಿಲ್ಲವೆಂಬುದನ್ನು ಸರ್ಕಾರವು ಮನಗೊಂಡು ಉದ್ದೇಶಿತ ವಸ್ತು ಸಂಗ್ರಹಾಲಯವನ್ನು ದಿನಾಂಕ: 31.7.2004ರಿಂದ ರದ್ದುಗೊಳಿಸಲು ಆದೇಶಿಸಿದೆ. ಹಾಗೂ ಅಲ್ಲಿ ಪ್ರದರ್ಶನಕ್ಕಿಟ್ಟಿರುವ ಕಲಾಕೃತಿಗಳನ್ನು ಸಮೀಪದಲ್ಲಿರುವ ಗದಗ್ ವಸ್ತು ಸಂಗ್ರಹಾಲಯಕ್ಕೆ ಸ್ಥಳಾಂತರಿಸಲು ಸಹ ಸರ್ಕಾರ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 750 ಐಎಫ್ಎಸ್ 2004 ದಿನಾಂಕ:6-7-2004ರ ಮೇರೆಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.7.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1630 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಕೆಳದಿ ವಸ್ತು ಸಂಗ್ರಹಾಲಯ ಮತ್ತು ಐತಿಹಾಸಿಕ ಸಂಶೋಧನಾ ಕೇಂದ್ರ, ಕೆಳದಿ ಸಂಸ್ಥೆಗೆ 2005-06ನೇ ಆರ್ಥಿಕ ಸಾಲಿಗೆ ಎರಡನೇ ಕಂತಿನ ಅನುದಾನ ಬಿಡುಗಡೆ ಕುರಿತು.

**ಓದಲಾಗಿದೆ:** 1] ಸರ್ಕಾರಿ ಆದೇಶ ಸಂಖ್ಯೆ: ಸಂಕಇ 3 ಕೆಎಂಯು 1996 ದಿನಾಂಕ: 22.3.2002

2) ಸರ್ಕಾರದ ಆದೇಶ ಸಂಖ್ಯೆ.ಸಂಕಇ 173 ಕೆಎಂಯು 2005.ದಿನಾಂಕ: 26.7.2005.

3] ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು ಇವರ ಪತ್ರ ಕ್ರಮಾಂಕ: ಡಿಎಎಂ:ಎಸಿಟಿ/18/ 2005-06 ದಿನಾಂಕ:27.9.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಕೆಳದಿ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರವನ್ನು ಖಾಯಂ ಅನುದಾನ ಸಂಹಿತೆಗೆ ಒಳಪಡಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರ ಕೆಳದಿ, ಸಾಗರ ತಾಲ್ಲೂಕು ಇವರಿಗೆ ಮೊದಲನೆ ಕಂತಾಗಿ ರೂಪಾಯಿ. 2.54 ಲಕ್ಷ (ರೂಪಾಯಿ ಎರಡು ಲಕ್ಷದ ಐವತ್ತು

ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ನಿರ್ದೇಶಕರು, ಮೈಸೂರು, ಇವರಿಗೆ ಮಂಜೂರಾತಿ ನೀಡಿ ಬಿಡುಗಡೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯ ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು, ಇವರು ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರಕ್ಕೆ 2005-06ನೇ ಆರ್ಥಿಕ ಸಾಲಿನಲ್ಲಿ ಆಯವ್ಯಯದಲ್ಲಿ ರೂ.7.63 ಲಕ್ಷ ವಾರ್ಷಿಕ ಅನುದಾನವನ್ನು ನಿಗದಿಪಡಿಸಿಕೊಂಡಿದ್ದು, ಈ ಪೈಕಿ ಮೊದಲನೆ ಕಂತಾಗಿ ಬಿಡುಗಡೆ ಮಾಡಲಾಗಿರುವ ರೂ.2.54 ಲಕ್ಷಕ್ಕೆ ಸದರಿ ಸಂಸ್ಥೆಯವರು ಮೊದಲನೆ ಕಂತನ್ನು ಬಳಸಿಕೊಂಡ ಬಗ್ಗೆ ಚಾರ್ಟೆಡ್ ಅಕೌಂಟೆಂಟ್ ಅವರಿಂದ ದೃಢೀಕರಿಸಿದ ಬಳಕೆ ಪ್ರಮಾಣ ಪತ್ರ ಹಾಗೂ ವೆಚ್ಚ ವಿವರಣಾ ಪಟ್ಟಿಯನ್ನು ಹಾಗೂ ದಿನಾಂಕ:1.4.2005 ರಿಂದ 20.8.2005ರ ವರೆವಿಗೆ ಆದ ಕಾರ್ಯಚಟುವಟಿಕೆಗಳ ಅನುಪಾಲನಾ ವರದಿಯನ್ನು ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಹಾಗೂ ಎರಡನೆ ಕಂತು ರೂ.5.09 ಲಕ್ಷವನ್ನು ಕೆಳದಿ ವಸ್ತು ಸಂಗ್ರಹಾಲಯ ಸಿಬ್ಬಂದಿಗೆ ವೇತನ ಪಾವತಿಸುವ ಸಂಬಂಧ ಲೆಕ್ಕ ಶೀರ್ಷಿಕೆ : 2205-00-103-0-01 (ಯೋಜನೇತರ) 101 ಸಹಾಯಾನುದಾನದ ಅಡಿಯಲ್ಲಿ ಬಿಡುಗಡೆ ಮಾಡಬೇಕೆಂದು ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ನಿರ್ದೇಶಕರು, ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 173 ಕೆಎಂಯು 2005, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರ, ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರಿಗೆ ಎರಡನೇ ಕಂತಾಗಿ ರೂ. 5.09 ಲಕ್ಷಗಳನ್ನು (ರೂಪಾಯಿ ಐದು ಲಕ್ಷದ ಒಂಭತ್ತು ಸಾವಿರ ಮಾತ್ರ) ಬಿಡುಗಡೆ ಮಾಡಲು ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯದ ನಿರ್ದೇಶಕರಿಗೆ ಮಂಜೂರಾತಿ ನೀಡಿ ಈ ಕೆಳಕಂಡ ಷರತ್ತಿಗೊಳಪಡಿಸಿ ಬಿಡುಗಡೆ ಮಾಡಿದೆ.

(1) ಸರ್ಕಾರ ಯಾವ ಉದ್ದೇಶಕ್ಕೆ ಹಣ ಮಂಜೂರು ಮಾಡಿದಿಯೋ ಅದೇ ಉದ್ದೇಶಕ್ಕೆ ಬಳಸುವುದು.

(2) ಸರ್ಕಾರ ಮಂಜೂರು ಮಾಡಿದ ಹಣ ಸಮರ್ಪಕವಾಗಿ ಬಳಕೆಯಾದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-103-0-01(ಯೋಜನೇತರ) 101 ಸಹಾಯನುದಾನದ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 842 ಐಎಫ್ (ಬಿ.ಎ) 2005, ದಿನಾಂಕ:22.10.2005ರ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.7.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1631

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ :** ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ ಇವರ ಸಹಯೋಗದೊಂದಿಗೆ ಬೆಳಗಾವಿ ಜಿಲ್ಲೆ ಖಾನಾಪುರ ತಾಲ್ಲೂಕಿನ ಹಲಸಿ ಗ್ರಾಮದ ಪ್ರಾಚೀನ ನೆಲೆಯ ಉತ್ಖನನವನ್ನು ಕೈಗೊಳ್ಳಲು ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ:ಸಂಕಇ 63 ಸ್ಪೀಮರ 2005 ದಿನಾಂಕ: 7.6.2005.

2) ನಿರ್ದೇಶಕರು, ಪ್ರಾಚ್ಯವಸ್ತು ಸಂಗ್ರಹಾಲಯ ಇವರ ಪತ್ರ ಸಂಖ್ಯೆ:ಡಿಎಎಂ:ಎಸಿಟಿ: 1:11/2005-06 ದಿನಾಂಕ:6.8.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕನ್ನಡ ಸಂಶೋಧನಾ ಸಂಸ್ಥೆ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರ ಸಹಯೋಗದೊಂದಿಗೆ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಹಲಸಿ ಗ್ರಾಮದ ಪ್ರಾಚೀನ ನೆಲೆಯ ಉತ್ಖನನವನ್ನು ಹೊಂದಾಣಿಕೆ ಅನುದಾನದೊಂದಿಗೆ ಕೈಗೊಳ್ಳಲು ರೂ.65,000/- ಅನುದಾನವನ್ನು ನಿಗದಿಪಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು ಇವರು ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ ಇವರ ಸಹಯೋಗದೊಂದಿಗೆ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಹಲಸಿ ಗ್ರಾಮದ ಪ್ರಾಚೀನ ನೆಲೆಯ ಉತ್ಖನನವನ್ನು ಕೈಗೊಳ್ಳಲು ಉದ್ದೇಶಿಸಿದ್ದು, ಒಟ್ಟಾರೆ ಉತ್ಖನನದ ವೆಚ್ಚ ರೂ. 1,29,100/- ರಲ್ಲಿ ಶೇಕಡಾ. 50 ರಷ್ಟು ಅಂದರೆ ರೂ. 65,000/- ವನ್ನು ಹೊಂದಾಣಿಕೆ ಅನುದಾನದ ಮೂಲಕ ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಇವರಿಗೆ ಡ್ರಾ ಮಾಡಿ ಬಿಡುಗಡೆ ಮಾಡಲು ಸೂಕ್ತ ಮಂಜೂರಾತಿ ಆದೇಶವನ್ನು ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಈ ಹಿನ್ನಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 218 ಕೆಎಂಯು 2005, ಬೆಂಗಳೂರು, ದಿನಾಂಕ:19ನೇ ನವೆಂಬರ್ 2005**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ 2005-06ನೇ ಸಾಲಿನಲ್ಲಿ ಕನ್ನಡ ಸಂಶೋಧನಾ ಸಂಸ್ಥೆ ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ ಇವರ ಸಹಯೋಗದೊಂದಿಗೆ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ, ಹಲಸಿ ಗ್ರಾಮದ ಪ್ರಾಚೀನ ನೆಲೆಯ ಉತ್ಖನನವನ್ನು ಕೈಗೊಳ್ಳಲು ಉತ್ಖನನದ ವೆಚ್ಚ ರೂ.1,29,100/- ರಲ್ಲಿ ಶೇ.50% ಅಂದರೆ ರೂ.65,000/- ಗಳನ್ನು ಹೊಂದಾಣಿಕೆ ಅನುದಾನದ ಮೂಲಕ ಕನ್ನಡ ಸಂಶೋಧನಾ ಸಂಸ್ಥೆ ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ ಇವರಿಗೆ ಹೊಂದಾಣಿಕೆ

ಅನುದಾನದ ಮೂಲಕ ಬಿಡುಗಡೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು ಇವರಿಗೆ ಬಿಡುಗಡೆ ಮಾಡಿದೆ.

(1) ಅನುದಾನ ಮೊತ್ತ ರೂ.65,000/-ನ್ನು ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ ಇವರಿಗೆ ಡ್ರಾ ಮಾಡಿ ಬಿಡುಗಡೆ ಮಾಡುವುದು.

(2) ಈ ಉತ್ಪನನದ ಇನ್ನುಳಿದ ವೆಚ್ಚವನ್ನು ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ, ಇವರು ಭರಿಸತಕ್ಕದ್ದು.

(3) ಈ ಅನುದಾನವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-103-0-01(ಯೋಜನೇತರ)-059 ಇತರ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ-1 ಟಿಎಫ್‌ಪಿ 96 ದಿನಾಂಕ:10.7.1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಸ್. ವಿಶಾಲಾಕ್ಷಮ್ಮ,
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್. 1632

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಕೆ.ಎ.ಉತ್ತಪ್ಪ, ಹಿಂದಿನ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು(ಅಪೀಲ್), ವಾಣಿಜ್ಯ ತೆರಿಗೆ ಇಲಾಖೆ, ದಾವಣಗೆರೆ ಇವರ ವಿರುದ್ಧ ದಾಖಲಾದ ಅಕ್ರಮ ಆಸ್ತಿ ಹೊಂದಿರುವ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:**
1. ಹೆಚ್ಚುವರಿ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಮ್–12/2000 ದಿನಾಂಕ 01–07–2005.
2. ತನಿಖಾಧಿಕಾರಿಯ ವರದಿ ದಿನಾಂಕ: 25–05–2005.
3. ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನಾ ಪಂಚನಾಮೆಗಳು, ಸಾಕ್ಷಿದಾರರ ಹೇಳಿಕೆಗಳು ಮತ್ತು ತನಿಖಾದಾರರ ಅಂತಿಮ ವರದಿಯ ಕಡತಗಳು.

ಶ್ರೀ ಕೆ.ಎ.ಉತ್ತಪ್ಪ, ಹಿಂದಿನ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು(ಅಪೀಲ್), ದಾವಣಗೆರೆ ಇವರ ವಿರುದ್ಧ ಗುನ್ನೆ ಸಂಖ್ಯೆ:12/2000ರಲ್ಲಿ ಬೆಂಗಳೂರು ನಗರ ಲೋಕಾಯುಕ್ತ ಪೋಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ 25–05–2005 ಮತ್ತು ತನಿಖಾ ದಾಖಲಾತಿಗಳನ್ನು ಮಾನ್ಯ ಹೆಚ್ಚುವರಿ ಪೋಲೀಸ್ ಮಹಾ ನಿರ್ದೇಶಕರು, ಪೋಲೀಸ್ ವಿಭಾಗ, ಬೆಂಗಳೂರು ಇವರು ಮೇಲೆ ಓದಲಾದ ಕ್ರ.ಸಂ.1ರ ಪತ್ರದೊಡನೆ ಕಳುಹಿಸುತ್ತಾ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ) ಅನ್ವಯ ಮಂಜೂರಾತಿ ಆದೇಶವನ್ನು ನೀಡಲು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೋಲೀಸ್ ಮಹಾ ನಿರ್ದೇಶಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಕ್ರ.ಸಂ.1ರಲ್ಲಿ ಓದಲಾದ ದಿನಾಂಕ 01–07–2005ರ ಪತ್ರದೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ:

1) ಪ್ರಥಮ ವರ್ತಮಾನ ವರದಿ ದಿನಾಂಕ: 05–05–2000.

2) ಶೋಧನಾ ಪಂಚನಾಮೆ:

ಅ) ಆರೋಪಿತರ ಮನೆ ನಂ.1131, 11ನೇ ಕ್ರಾಸ್, 2ನೇ ಹಂತ, ಮಹಾಲಕ್ಷ್ಮಿಪುರಂ, ವೆಸ್ಟ್ ಕಾರ್ಡ್ ರಸ್ತೆ, ಬೆಂಗಳೂರನ್ನು ದಿನಾಂಕ: 07–05–2000ರಂದು ಶೋಧನೆ ಮಾಡಲಾಗಿರುತ್ತದೆ.

ಆ) ಆರೋಪಿತರು ಕೆಲಸ ಮಾಡುವ ಕಛೇರಿ ಅಂದರೆ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ಕಛೇರಿ, ದಾವಣಗೆರೆ ಅನ್ನು ದಿನಾಂಕ 08–05–2000ರಂದು ಶೋಧನೆ ಮಾಡಲಾಗಿರುತ್ತದೆ.

3) ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ 25–05–2005

4) ತನಿಖೆಯ ಅಂತಿಮ ವರದಿಯ ಭಾಗಗಳು.

ಈ ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿದ ತನಿಖಾಧಿಕಾರಿಯ ಅಂತಿಮ ವರದಿಯ ಪ್ರಕಾರ ಆಪಾದಿತ ಸಾರ್ವಜನಿಕ ಅಧಿಕಾರಿಯಾದ ಶ್ರೀ ಕೆ.ಎ.ಉತ್ತಪ್ಪ, ಹಿಂದಿನ ಜಂಟಿ ಆಯುಕ್ತರು(ಅಪೀಲ್), ದಾವಣಗೆರೆ ಇವರು ದಿನಾಂಕ 05–08–1974 ರಿಂದ 08–05–2000ದವರೆಗಿನ ಪರಿಶೀಲನಾ ಅವಧಿ(ಚೆಕ್ ಪಿರಿಯಡ್)ಯಲ್ಲಿ ಒಟ್ಟು ರೂ.52,94,332–19 ಪೈಸೆಗಳ ಆಸ್ತಿಯನ್ನು ಹೊಂದಿರುತ್ತಾರೆ ಮತ್ತು ಈ ಅವಧಿಯಲ್ಲಿ ಆಪಾದಿತರು ತಮ್ಮ ಹಾಗೂ ತಮ್ಮ ಕುಟುಂಬದ ಸದಸ್ಯರಿಗಾಗಿ ಮಾಡಿರುವ ಒಟ್ಟು ಖರ್ಚು ರೂ.17,79,641–44 ಪೈಸೆಗಳಾಗಿದ್ದು ಆರೋಪಿತ ಅಧಿಕಾರಿಯು ಈ ಅವಧಿಯಲ್ಲಿ ಎಲ್ಲಾ ಬಲ್ಲ ಮೂಲಗಳಿಂದ ಗಳಿಸಿರುವ ಆದಾಯವು ರೂ.25,19,793–95 ಪೈಸೆಗಳಾಗಿರುತ್ತವೆ. ಆರೋಪಿತ ಅಧಿಕಾರಿಯ ಆಸ್ತಿಯ ಮತ್ತು ಖರ್ಚಿನ ಒಟ್ಟು ಮೊತ್ತ ರೂ.70,73,973–63 ಪೈಸೆಗಳಾಗಿದ್ದು, ಹೆಚ್ಚಿನ ಪ್ರಮಾಣದ ಆಸ್ತಿಯ ಮೊತ್ತವು ರೂ.45,54,179–68 ಪೈಸೆಗಳಾಗಿರುತ್ತವೆ. ಅಂದರೆ ಆಪಾದಿತ ಸಾರ್ವಜನಿಕ ಅಧಿಕಾರಿ ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತಲೂ ಶೇ.180.73 ರಷ್ಟು ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡು ಬಂದಿರುತ್ತದೆ. ಈ ಹೆಚ್ಚಿನ ಆಸ್ತಿಯ ಬಗ್ಗೆ ಆರೋಪಿತರು ಯಾವುದೇ ತೃಪ್ತಿಕರ ವಿವರಣೆ ಅಥವಾ ಲೆಕ್ಕವನ್ನು ನೀಡಿರುವುದಿಲ್ಲವಾದ್ದರಿಂದ ಆರೋಪಿಯು ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(1)ರಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧವು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಎಂದು ಮತ್ತು ಆರೋಪಿತರು ಸಾರ್ವಜನಿಕ ಹಿತದೃಷ್ಟಿಯಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಅರ್ಹರಾಗಿರುವುದರಿಂದ ಅವರನ್ನು ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಪೂರ್ವಾನುಮತಿಯನ್ನು ಹೆಚ್ಚುವರಿ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿರುತ್ತಾರೆ.

ದಿನಾಂಕ 15-05-2000ರಂದು ಬೆಂಗಳೂರು ವಿಭಾಗ, ಕರ್ನಾಟಕ ಲೋಕಾಯುಕ್ತ ಪೋಲೀಸ್ ಠಾಣೆಯ ಅಂದಿನ ಈ ಪ್ರಕರಣದ ತನಿಖಾಧಿಕಾರಿಯವರಾದ ಶ್ರೀ ಎ.ಎಲ್.ದೇಸಾಯಿ, ಡಿ.ಎಸ್.ಪಿ, ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ, ಬೆಂಗಳೂರು ಇವರು ಈ ಪ್ರಕರಣದ ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಕೆ.ಎ.ಉತ್ತಪ್ಪ, ಹಿಂದಿನ ಜಂಟಿ ಆಯುಕ್ತರು(ಅಪೀಲ್), ದಾವಣಗೆರೆ ಇವರ ವಿರುದ್ಧ ಅಕ್ರಮ ಸಂಪತ್ತಿನ ವರದಿಯನ್ನು ಪೋಲೀಸ್ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ವಿಭಾಗಕ್ಕೆ ಸಲ್ಲಿಸಿದ್ದು, ಆರೋಪಿತರು 1974ನೇ ಸಾಲಿನಲ್ಲಿ ವಾಣಿಜ್ಯ ತೆರಿಗೆ ಅಧಿಕಾರಿಯಾಗಿ ಕೆಲಸಕ್ಕೆ ಸೇರಿದ್ದು, ಚೆಕ್ ಅವಧಿಯ ಅಂತ್ಯಕ್ಕೆ ಜಂಟಿ ಆಯುಕ್ತರಾಗಿ ಕರ್ತವ್ಯ ನಿರ್ವಹಿಸುತ್ತಿದ್ದರೆಂದು ಮತ್ತು ಇವರ ಸೇವಾವಧಿಗೆ ಸಂಬಂಧಿಸಿದಂತೆ ಆಸ್ತಿ ಮತ್ತು ಮಾಡಲಾದ ಖರ್ಚು, ಇವರ ಬಲ್ಲ ಆದಾಯ, ಬಲ್ಲ ಆದಾಯಕ್ಕಿಂತ ಹೆಚ್ಚಿನ ಆಸ್ತಿ ಹೊಂದಿರುವ ಕುರಿತು ಮಾಹಿತಿಯನ್ನು ಈ ವರದಿಯಲ್ಲಿ ತಿಳಿಸಿದ್ದು, ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ) ಅನ್ನು ಕಲಂ 13(2) ಪ್ರಕಾರ ಪ್ರಕರಣವನ್ನು ದಾಖಲು ಮಾಡಿಕೊಳ್ಳಲು ಕೋರಿದ್ದರ ಮೇರೆಗೆ ಈ ವರದಿಯ ಆಧಾರದ ಮೇಲೆ ಅಂದಿನ ಪೋಲೀಸ್ ಅಧೀಕ್ಷಕರಾದ ಶ್ರೀ ಜಿ.ರಮೇಶ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ವಿಭಾಗ ಇವರು ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆ ಕೈಗೊಳ್ಳಲು ಶ್ರೀ ಎ.ಎಲ್.ದೇಸಾಯಿ, ಪೋಲೀಸ್ ಉಪ ಅಧೀಕ್ಷಕರು, ಇವರಿಗೆ ಅನುಮತಿಯನ್ನು ನೀಡಿದ್ದು, ಅದರಂತೆ ಅವರು ಆರೋಪಿತ ಅಧಿಕಾರಿಯ ವಿರುದ್ಧ ಅವರ ಠಾಣೆಯ ಮೊಕದ್ದಮೆ ಸಂಖ್ಯೆ:12/2000 ಅನ್ನು ಸದರಿ ಕಾಯ್ದೆಯಡಿ ದಾಖಲು ಮಾಡಿರುತ್ತಾರೆ ಮತ್ತು ಘನ 23ನೇ ಅಡಿಷನಲ್ ಸಿಟಿ ಸಿವಿಲ್ ಮತ್ತು ವಿಶೇಷ ನ್ಯಾಯಾಧೀಶರಿಗೆ ಪ್ರಥಮ ವರ್ತಮಾನ ವರದಿಯನ್ನು ಸಲ್ಲಿಸಿರುತ್ತಾರೆ ಹಾಗೂ ಈ ಬಗ್ಗೆ ವರದಿ ಸಲ್ಲಿಸಿ ಸಿ.ಆರ್.ಪಿ.ಸಿ. ಕಲಂ 93ರ ಮೇರೆಗೆ ಆರೋಪಿಯ ಮನೆ ಮತ್ತು ಕಛೇರಿಯನ್ನು ಜಪ್ತಿ ಮಾಡಲು ಜಪ್ತಿ ವಾರಂಟ್ ಅನ್ನು ಕೋರಿ ಪಡೆದಿರುತ್ತಾರೆ. ದಿನಾಂಕ 07-05-2000ರಂದು ಈ ಆರೋಪಿತ ಅಧಿಕಾರಿಯ ವಾಸದ ಮನೆ ನಂ.1131, 11ನೇ ಕ್ರಾಸ್, 2ನೇ ಹಂತ, ಮಹಾಲಕ್ಷ್ಮಿಪುರಂ, ವೆಸ್ಟ್ ಕಾರ್ಡ್ ರಸ್ತೆ, ಬೆಂಗಳೂರು ಇದರ ಜಪ್ತಿ ಕಾರ್ಯವನ್ನು ಸಾಕ್ಷಿದಾರರುಗಳಾದ ಶ್ರೀ ಕೆ.ಎನ್.ವೆಂಕಟಾಚಲಪತಿ, ರೇಷ್ಮೆ ವಿಸ್ತರಣೆ ಅಧಿಕಾರಿ, ಶ್ರೀ ವೀರಣ್ಣ, ಪ್ರ.ದ.ಸ., ಸಾರಿಗೆ ಇಲಾಖೆ ಮತ್ತು ಕು:ರೂಪರಾಣಿ, ಪ್ರ.ದ.ಸ., ಆಯುಕ್ತರ ಕಛೇರಿ, ಸಾರಿಗೆ ಇಲಾಖೆ ಇವರುಗಳ ಸಮಕ್ಷಮದಲ್ಲಿ ಹಾಗೂ ದಿನಾಂಕ 08-05-2000ರಂದು ಆರೋಪಿತ ಅಧಿಕಾರಿಯು ಕಾರ್ಯನಿರ್ವಹಿಸುತ್ತಿದ್ದ ಕಛೇರಿಯಾದ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು(ಅಪೀಲ್), ದಾವಣಗೆರೆ ಕಛೇರಿಯನ್ನು ಸಾಕ್ಷಿದಾರರಾದ ಶ್ರೀ ಎ.ಪ್ರಕಾಶ್, ದ್ವಿ.ದ.ಸ., ಲೋಕೋಪಯೋಗಿ ಇಲಾಖೆ, ದಾವಣಗೆರೆ ಮತ್ತು ಶ್ರೀ ಜೆ.ಗುರುಮೂರ್ತಿ, ಆರ್.ಐ.ವಿಭಾಗೀಯ ಅಧಿಕಾರಿಗಳ ಕಛೇರಿ, ಕಂದಾಯ ಇಲಾಖೆ, ದಾವಣಗೆರೆ ಇವರುಗಳ ಸಮಕ್ಷಮದಲ್ಲಿ ಜಪ್ತಿ ಕ್ರಮ ಜರುಗಿಸಿ ಪಂಚನಾಮೆಯನ್ನು ತಯಾರಿಸಿರುತ್ತಾರೆ. ದಿನಾಂಕ 07-05-2000ರಂದು ಆರೋಪಿತರ ಮನೆಯ ಜಪ್ತಿ ಕಾಲದಲ್ಲಿ ಕಂಡುಬಂದ ಚಿನ್ನ, ಬೆಳ್ಳಿ, ನಗದು, ಬ್ಯಾಂಕ್ ದಾಖಲೆ, ಪೀಠೋಪಕರಣಗಳು, ಬಟ್ಟೆಗಳು, ಬೆಲೆಬಾಳುವ ವಿದ್ಯುತ್ ಉಪಕರಣಗಳು ಮತ್ತು ಗೃಹೋಪಯೋಗಿ ವಸ್ತುಗಳ ವಿವರಗಳನ್ನು ಮಹಜರ್‌ನಲ್ಲಿ ನಮೂದಿಸಿರುತ್ತಾರೆ ಮತ್ತು ತನಿಖೆಯನ್ನು ನಡೆಸಿರುತ್ತಾರೆ. ತದನಂತರ ಈ ಪ್ರಕರಣದಲ್ಲಿ ದಿನಾಂಕ 08-05-2000ರಂದು ಆರೋಪಿತ ಅಧಿಕಾರಿಯ ಕಛೇರಿಯನ್ನು ಜಪ್ತಿ ಮಾಡಿ ಪಂಚನಾಮೆ ಮಾಡಿದ್ದು, ಈ ಶೋಧನೆ ವೇಳೆಯಲ್ಲಿ ತನಿಖೆಗೆ ಅವಶ್ಯಕವಾದ ಯಾವುದೇ ಕಾಗದ ಪತ್ರಗಳಾಗಲಿ / ವಸ್ತುಗಳಾಗಲಿ ದೊರಕಲಿಲ್ಲವೆಂದು ತಿಳಿಸಿದ್ದಾರೆ. ತನಿಖಾಧಿಕಾರಿಯು ಆರೋಪಿ ಅಧಿಕಾರಿಯು ಎಲ್ಲಾ ಮೂಲಗಳಿಂದ ಹೊಂದಿರುವ ಆದಾಯ, ಚರ ಮತ್ತು ಸ್ಥಿರಾಸ್ತಿಗಳ ಮೌಲ್ಯ ಮತ್ತು ಆತನ ಕುಟುಂಬದ ವೆಚ್ಚ ಇವುಗಳನ್ನು ಪರಿಶೀಲಿಸಿದಾಗ ಆರೋಪಿಯು ತನ್ನ ನಿಗದಿತ ಆದಾಯಕ್ಕಿಂತ ರೂ.45,54,179-68 ಮೌಲ್ಯದ ಹೆಚ್ಚಿನ ಸಂಪತ್ತು (ಶೇಕಡವಾರು 180.73) ಹೊಂದಿರುವುದು ದೃಢಪಟ್ಟಿರುವುದರಿಂದ 1988ರ ಲಂಚ ನಿರೋಧಕ ಕಾಯ್ದೆಯ ಕಲಂ 13(1)(ಇ) ಜೊತೆಗೆ 13(2) ಪ್ರಕಾರ ಆರೋಪಿಯನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅಭಿಯೋಜನಾ ಮಂಜೂರಾತಿಯನ್ನು ನೀಡುವಂತೆ ಸಕ್ಷಮ ಪ್ರಾಧಿಕಾರಿಯನ್ನು ಕೋರಲು ನಿವೇದಿಸಿಕೊಂಡಿರುತ್ತಾರೆ.

ಈ ಪ್ರಕರಣದಲ್ಲಿ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲೆಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ:01-07-2005ರೊಂದಿಗೆ ಕಳುಹಿಸುತ್ತಾ, ಆಪಾದಿತರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಗೆ ಕಲಂ 13(2)ರಡಿಯಲ್ಲಿ ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ಪ್ರಕಾರ ಸಮರ್ಪಕವಾದ ಅಭಿಯೋಜನಾ ಮಂಜೂರಾತಿ ಆದೇಶವನ್ನು ನೀಡುವಂತೆ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಆರೋಪಿ ಶ್ರೀ ಕೆ.ಎ.ಉತ್ತಪ್ಪ ಇವರು ದಿನಾಂಕ 05-08-1974ರಂದು ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ವಾಣಿಜ್ಯ ತೆರಿಗೆ ಅಧಿಕಾರಿಯಾಗಿ ಸೇವೆಗೆ ಸೇರಿದ್ದರು. ಕಾಲ ಕಾಲಕ್ಕೆ ಉನ್ನತ ಹುದ್ದೆಗೆ ಬಡ್ತಿ ಹೊಂದಿದ್ದು ಈ ಪ್ರಕರಣ ದಾಖಲಾಗುವ ಸಂದರ್ಭದಲ್ಲಿ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರಾಗಿದ್ದರು. ಈ ಪ್ರಕರಣಕ್ಕೆ ಸಂಬಂಧಿಸಿದಂತೆ 05-08-1974 ರಿಂದ 08-05-2000ದವರೆಗಿನ ಅವಧಿಯು ಪರಿಶೀಲನಾ ಅವಧಿ (ಚೆಕ್ ಪಿರಿಯಡ್)ಯಾಗಿರುತ್ತದೆ. ಈ ಪ್ರಕರಣದಲ್ಲಿ ತನಿಖೆಗಾಗಿ ಸಂಗ್ರಹಿಸಿದ ದಾಖಲಾತಿಗಳ ವಿವರ, ಆರೋಪಿಯು ಒದಗಿಸಿರುವ ಮಾಹಿತಿಗಳ ವಿವರ, ಆರೋಪ ಸಲ್ಲಿಸಿರುವ ವಾರ್ಷಿಕ ಆಸ್ತಿ ಮತ್ತು ದಾಯಿತ್ವಗಳ ಪಟ್ಟಿಯ ವಿವರ, ಆರೋಪಿಯ ಆದಾಯ, ಆರೋಪಿಯ ಕುಟುಂಬದ ವೆಚ್ಚ, ಆರೋಪಿಯು ಹೊಂದಿರುವ ಚರ ಮತ್ತು ಸ್ಥಿರ ಆಸ್ತಿಗಳ ವಿವರ, ಹಾಗೂ ತನಿಖೆಯಲ್ಲಿ ಕಂಡುಬಂದಂತಹ ಅಂಶಗಳನ್ನು ಪರಿಶೀಲಿಸಿ ತನಿಖಾಧಿಕಾರಿಯು ನೀಡಿದ ವರದಿಯನ್ನು ಪರಿಶೀಲಿಸಲಾಗಿದೆ.

ಈ ಪ್ರಕರಣವು ಬಲ್ಲ ಮೂಲಗಳ ಆದಾಯಕ್ಕಿಂತ ಅಪಾರ ಪ್ರಮಾಣದಲ್ಲಿ ಆಸ್ತಿಯನ್ನು ಹೊಂದಿರುವುದಕ್ಕೆ ಸಂಬಂಧಿಸಿದೆ. ಈ ಪ್ರಕರಣವನ್ನು ಪ್ರಸ್ತುತ ನಿರ್ವಹಿಸುತ್ತಿರುವ ಶ್ರೀ ಆರ್.ಸಿ.ಲೋಕೇಶ್ ಕುಮಾರ್, ಪೋಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಇವರನ್ನು ದಿನಾಂಕ 11-10-2005ರಂದು ಕರೆಯಿಸಲಾಯಿತು. ಅವರನ್ನು ಈ ಪ್ರಕರಣದ ಬಗ್ಗೆ ವಿಚಾರಿಸಲಾಯಿತು ಹಾಗೂ ಅವರು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ತಂದಿದ್ದ ದಾಖಲೆಗಳನ್ನು ಪರಿಶೀಲಿಸಲಾಯಿತು. ಸದರಿ ವರದಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಕೆ.ಎ.ಉತ್ತಪ್ಪ, ಹಿಂದಿನ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು, ಇವರು ತಮ್ಮ ಆದಾಯಕ್ಕಿಂತ ಸುಮಾರು ರೂ.45,54,179-68ಗಳ ಮೌಲ್ಯದಷ್ಟು ಆಸ್ತಿಯನ್ನು ಹೊಂದಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಆದರೆ, ಈ ಆಪಾದಿತ ಅಧಿಕಾರಿಯ ಎಲ್ಲಾ ಬಲ್ಲ ಮೂಲಗಳ ಆದಾಯವು ರೂ.25,19,793-95 ಆಗಿರುತ್ತದೆ. ಈ ಆಪಾದಿತ ಅಧಿಕಾರಿಯು ಸುಮಾರು ರೂ.45,54,179-68ಗಳ ಅಪಾರ ಆಸ್ತಿಯನ್ನು ಹೊಂದಿದ್ದಾರೆ. ಈ ಪ್ರಕರಣದ ತನಿಖಾಧಿಕಾರಿಯವರಾದ ಶ್ರೀ ಎ.ಎಲ್.ದೇಸಾಯಿ, ಡಿ.ಎಸ್.ಪಿ, ಕರ್ನಾಟಕ ಲೋಕಾಯುಕ್ತ ಇವರ ಸೋರ್ಸ್ ರಿಪೋರ್ಟಿನ ಆಧಾರದ ಮೇಲೆ ಅಂದಿನ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಕರ್ನಾಟಕ ಲೋಕಾಯುಕ್ತ ಇವರು ಈ ಪ್ರಕರಣವನ್ನು ದಾಖಲಿಸಲು ಮತ್ತು ಮುಂದಿನ ತನಿಖೆಯನ್ನು ನಡೆಸಲು ಪೋಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ ಇವರಿಗೆ ಅನುಮತಿ ನೀಡಿರುವ ಮೇರೆಗೆ,ಈ ಉಪಾಧೀಕ್ಷಕರು ತಮ್ಮ ಠಾಣೆಯ ಮೊಕದ್ದಮೆ

ಸಂಖ್ಯೆ:12/2000ರಲ್ಲಿ ಲಂಚನಿರೋಧಕ ಕಾಯ್ದೆ, 1988ರ ಸೆಕ್ಷನ್13(1)(ಇ)ರಡಿಯಲ್ಲಿ ಸೆಕ್ಷನ್ 13(2)ರೊಂದಿಗೆ ಓದಲಾದಂತೆ, ದಾಖಲಿಸಿದ್ದಾರೆ. ಈ ಆಪಾದಿತ ಅಧಿಕಾರಿಯ ಮನೆಯನ್ನು ದಿನಾಂಕ 07–05–2000ರಂದು ಮತ್ತು ಇವರು ಕಾರ್ಯನಿರ್ವಹಿಸುತ್ತಿದ್ದ ಕಛೇರಿಯನ್ನು ದಿನಾಂಕ 08–05–2000ರಂದು ಶೋಧನೆ ಮಾಡಲಾಗಿದೆ. ಈ ಎರಡೂ ಶೋಧನೆಗಳನ್ನು ಪಂಚ ಸಾಕ್ಷಿದಾರರ ಸಮಕ್ಷಮದಲ್ಲಿ ನಡೆಸಲಾಗಿದೆ. ಈ ಎರಡೂ ಸ್ಥಳಗಳ ದಾಳಿಗಳಿಗೆ ತಯಾರಿಸಿದ ಮಹಜರ್ ಅನ್ನು ಪಂಚ ಸಾಕ್ಷಿದಾರರು ದೃಢೀಕರಿಸಿರುತ್ತಾರೆ. ಈ ಪ್ರಕರಣದಲ್ಲಿ ಶ್ರೀ ಎ.ಎಲ್.ದೇಸಾಯಿ, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಕರ್ನಾಟಕ ಲೋಕಾಯುಕ್ತ ಇವರು 23ನೇ ನ್ಯಾಯಾಲಯ, ಅಡಿಷನಲ್ ಸಿಟಿ ಸಿವಿಲ್ ಸ್ಪೆಷಲ್ ನ್ಯಾಯಾಧೀಶರು, ಬೆಂಗಳೂರು ನಗರ ಇಲ್ಲಿ ಸಲ್ಲಿಸಿದ್ದ ಎಫ್ಐಆರ್ ಅನ್ನು ಸಹ ನೋಡಲಾಯಿತು. ತನಿಖೆಯ ಸಂದರ್ಭದಲ್ಲಿ ಪರೀಕ್ಷೆಗೊಳಗಾದ ಸಾಕ್ಷಿದಾರರ ಹೇಳಿಕೆಯನ್ನು ಸಹ ಪರಿಶೀಲಿಸಲಾಯಿತು. ಶ್ರೀ ಆರ್.ಸಿ.ಲೋಕೇಶ್ ಕುಮಾರ್, ಪೋಲೀಸ್ ಇನ್ಸ್‌ಪೆಕ್ಟರ್, ಲೋಕಾಯುಕ್ತ ಇವರು ಸಾದರಪಡಿಸಿದ ದಾಖಲೆಗಳನ್ನು ಅವಲೋಕಿಸಿದಾಗ. ಈ ಮೇಲೆ ಹೇಳಿದ ಚೆಕ್ ಪಿರಿಯಡ್‌ನಲ್ಲಿ ಆರೋಪಿಯು ರೂ.25,19,793–95ಗಳ ಆದಾಯವನ್ನು ಹೊಂದಿದ್ದರು, ಆರೋಪಿ ಮತ್ತು ಅವರ ಕುಟುಂಬದ ವೆಚ್ಚ ರೂ.17,79,641–44ಗಳಾಗಿದ್ದು, ರೂ.52,94,332–19ಗಳ ಚರ ಮತ್ತು ಸ್ಥಿರ ಆಸ್ತಿಯನ್ನು ಹೊಂದಿದ್ದರು ಮತ್ತು ಇದರಿಂದಾಗಿ ಆರೋಪಿಯು ತನ್ನ ನಿಗದಿತ ಆದಾಯಕ್ಕಿಂತ ಮೀರಿ ರೂ.45,54,179–68ಗಳ ಮೌಲ್ಯದ ಆಸ್ಥಿಯನ್ನು ಹೊಂದಿರುವುದು ಮೇಲ್ನೋಟಕ್ಕೆ ನಿಜವೆಂದು ಕಂಡುಬಂದಿರುವುದರಿಂದಲೂ ಹಾಗು ಕ್ರಿಮಿನಲ್ ಮೊಕದ್ದಮೆ ಹೂಡಲು ಇದು ಸೂಕ್ತ ಪ್ರಕರಣವೆಂದು ಕಂಡುಬಂದಿರುವುದರಿಂದಲೂ, ಆರೋಪಿತ ಅಧಿಕಾರಿಯಾದ ಶ್ರೀ ಕೆ.ಎ.ಉತ್ತಪ್ಪ, ಹಿಂದಿನ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಅನುಮತಿ ನೀಡಲು ಸರ್ಕಾರವು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 4 ವಾತೆತ 2005, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ)ಯಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಕೆ.ಎ.ಉತ್ತಪ್ಪ, ಪ್ರಸ್ತುತ ವಾಣಿಜ್ಯ ತೆರಿಗೆ ಅಪರ ಆಯುಕ್ತರು(ಹಿಂದಿನ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು) ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಲಂಚ ನಿರೋಧಕ ಕಾಯ್ದೆ ಕಲಂ 13(1)(ಇ) ಜೊತೆಯಲ್ಲಿ ಓದಲಾದ 13(2)ರ ಪ್ರಕಾರ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡುತ್ತದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 29–10–2005 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ, ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1538

**ಆಲಿಸ್ ಗೊನ್ಸಾಲ್ವಿಸ್**

ಪೀಠಾಧಿಕಾರಿ, ಆರ್ಥಿಕ ಇಲಾಖೆ (ವಾ.ತೆ.–2)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಡಿ.ವಿ.ಕಾಂಬಳೆ, ಪಿಐ., ಸಿಓಡಿ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಇವಿ/2/ಈವ/92 ಆಪು ಸಂಖ್ಯೆ: 356 / ಈವ / 92. ದಿನಾಂಕ:03-07-1992.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬಿ/5/117 95-96. ದಿನಾಂಕ:04-12-1998.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:19-08-2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/117/ 95-96 ದಿನಾಂಕ:28-02-2003.

**ಪ್ರಸ್ತಾವನೆ:**

ಶ್ರೀ ಡಿ.ವಿ.ಕಾಂಬಳೆ, ಪಿಐ ಸಿಓಡಿ ಬೆಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು)ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

''ಶ್ರೀ ಡಿ.ವಿ.ಕಾಂಬಳೆಯವರೇ ನೀವು 1986-87ನೇ ಇಸವಿಯಲ್ಲಿ ರಾಯಚೂರು ಗ್ರಾಮೀಣ ಠಾಣೆಯಲ್ಲಿ ಪೊಲೀಸ್ ಉಪ ನಿರೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿರುವಾಗ ಸದರಿ ಠಾಣೆಯ ಕೆಲವು ಮಹತ್ವದ ಸತ್ಯದಾಖಲೆ ಪುಸ್ತಕ ಪತ್ರಗಳನ್ನು ತೃಪ್ತಿಕರವಾಗಿ ನಿರ್ವಹಿಸದೆ ಮತ್ತು ಹಲವಾರು ಅಪರಾಧ ಪ್ರಕರಣಗಳನ್ನು ಅತೃಪ್ತಿಕರವಾಗಿ ಅಲಕ್ಷ್ಯತನದಿಂದ ಮತ್ತು ಉದಾಶೀನತೆಯಿಂದ ತನಿಖೆ ನಿರ್ವಹಿಸಿ ನಿಮ್ಮ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತೆ, ವಿಮುಖತೆ ಮತ್ತು ಅಶಿಸ್ತನ್ನು ತೋರ್ಪಡಿಸಿರುವಿರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:03-07-1992ರ ಆದೇಶದಲ್ಲಿ ಅರ್ಜಿದಾರರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ 5 ವರ್ಷ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಕಾಲವಿಳಂಬಿತ ಮೇಲ್ಮನವಿಯೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:04-12-1998ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಠಾಣೆಯ ಮಹತ್ವದ ದಾಖಲೆಗಳಾದ ಅಪರಾಧ ಅಂಗಶೋಧನೆ ಪುಸ್ತಕಗಳಲ್ಲಿ ಹಾಗೂ ಆರೋಪಣಾ ಜಾಮೀನುಬಾಂಡ್ ಮತ್ತು ದಸ್ತಗಿರಿ ಪುಸ್ತಕಗಳಲ್ಲಿ ಸಹಿ ಮಾಡದೆ, ದಿನಾಂಕ:01-06-1986 ರಿಂದ ನಗದು ಪುಸ್ತಕವನ್ನು ಬರೆಯದೇ, ತನಿಖೆಯಲ್ಲಿರುವ ಪ್ರಕರಣಗಳಲ್ಲಿ ಉದಾಸೀನತೆ ಮಾಡಿರುವುದು ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಕಂಡುಬಂದಿದ್ದು, ಶಿಸ್ತು ಪ್ರಾಧಿಕಾರಿಯು ಲಘು ದಂಡನೆ ವಿಧಿಸಿದ್ದು, ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 227 ಪೊಸಿಅ 2002 ಬೆಂಗಳೂರು, ದಿನಾಂಕ:8ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ವಿ.ಕಾಂಬಳೆ, ಪಿಐ ಸಿಓಡಿ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:19.08.2002ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 1598 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ.ವಿ.ನಾರಾಯಣಸ್ವಾಮಿ, ಸಿಪಿಸಿ 57, (ಹಾಲಿ ಸಿಹೆಚ್‌ಸಿ 101) ಬೇತಮಂಗಲ ಠಾಣೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಚಿನ್ನದ ಗಣಿ ಪ್ರದೇಶ, ಕೋಲಾರ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ (1) ಶಿಕ್ಷೆ/ 55/2001-02, ಓಬಿ ಸಂಖ್ಯೆ:190/01-02. ದಿನಾಂಕ:31-01-2002.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/37/03- 04 ಓಬಿ ಸಂಖ್ಯೆ:6/04-05 ದಿನಾಂಕ:07-05-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:24-12-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/8/ 2005. ದಿನಾಂಕ:21-05-2005.

**ಪ್ರಸ್ತಾವನೆ:**

ಶ್ರೀ ಬಿ.ವಿ.ನಾರಾಯಣಸ್ವಾಮಿ, ಸಿಪಿಸಿ 57 (ಹಾಲಿ ಹೆಚ್‌ಸಿ 101) ಬೇತಮಂಗಲ ಪೊಲೀಸ್ ಠಾಣೆ, ಇವರ ವಿರುದ್ಧ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ಶ್ರೀ ನಾರಾಯಣಸ್ವಾಮಿ, ಸಿವಿಲ್ ಪೇದೆ 57, ಬೇತಮಂಗಲ ಪೊಲೀಸ್ ಠಾಣೆ ಆದ ನೀವು ದಿನಾಂಕ:31-03-2001 ರಂದು ಬೆಂಗಳೂರಿನ ಮಾನ್ಯ ಉಚ್ಛ ನ್ಯಾಯಾಲಯದ ಕ್ರಿಮಿನಲ್ ಪಿಟಿಷನ್ ಸಂಖ್ಯೆ:1310/2000 ಅನ್ನು ಜಿಲ್ಲಾ ಪೊಲೀಸ್ ಕಚೇರಿಯಿಂದ ಸ್ವೀಕರಿಸಿದ್ದು, ಅದನ್ನು ನಿಗದಿತ ದಾಖಲಾತಿಗಳಲ್ಲಿ ನಮೂದು ಮಾಡಿ, ಸದರಿ ಕ್ರಿಮಿನಲ್ ಪಿಟಿಷನ್ನಿನ ವಿಲೇವಾರಿಯ ಬಗ್ಗೆ ಗಮನಹರಿಸದೇ, ಅದನ್ನು ನ್ಯಾಯಾಲಯಕ್ಕೆ ಹಿಂದಿರುಗಿಸದೆ, ನಿಮ್ಮ ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನವನ್ನು ತೋರ್ಪಡಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೆಜಿಎಫ್, ಕೋಲಾರ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:31-01-2002ರ ಆದೇಶದಲ್ಲಿ ಅರ್ಜಿದಾರರಿಗೆ ದಿನಾಂಕ:05-10-2001 ರಿಂದ 12-11-2001ರ ವರೆಗಿನ ಅವಧಿಯನ್ನು (ಅಮಾನತ್ತಿನಲ್ಲಿ ಕಳೆದ ಅವಧಿಯನ್ನು) ಅಮಾನತ್ತೆಂದೇ ಪರಿಗಣಿಸಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ, ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:07-05-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ದ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷರೋಪಣಾ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ. ನ್ಯಾಯಾಲಯದ ವಿಷಯಗಳಿಗೆ ಯಾವಾಗಲೂ ಆದ್ಯತೆಯ ಮೇಲೆ ಗಮನ ನೀಡಬೇಕಾಗಿದ್ದು, ಅದನ್ನು ಗಮನಿಸದೆ ಇರುವುದು ಬೇಜವಾಬ್ದಾರಿತನ, ನಿರ್ಲಕ್ಷತೆ ತೋರಿಸುತ್ತದೆ.

ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ಲಘು ದಂಡನೆ, ವಿಧಿಸಿದ್ದು, ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 12 ಪೊಸಿಅ 2005 ಬೆಂಗಳೂರು, ದಿನಾಂಕ: 8ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬಿ.ವಿ.ನಾರಾಯಣಸ್ವಾಮಿ ಸಿಪಿಸಿ 57, (ಹಾಲಿ ಹೆಚ್‌ಸಿ 101) ಬೇತಮಂಗಲ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:24-12-2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 1599

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೆನೆನಿ 2005, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2005**

**ವಿಷಯ:** ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಮೀಸಲಾಗಿರುವ ಹುದ್ದೆಗಳಿಗೆ ಅಂಗವಿಕಲ ಅಭ್ಯರ್ಥಿಗಳನ್ನು ಪರಿಗಣಿಸಲು ವೈದ್ಯಕೀಯ ಪ್ರಮಾಣ ಪತ್ರ ನಿಗದಿಪಡಿಸುವ ಬಗ್ಗೆ.

**ಉಲ್ಲೇಖ:**
1) ದಿನಾಂಕ 13.9.1995 ರ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 7 ಸೇಸ್ಥಅ 94.
2) ದಿನಾಂಕ 29.11.2002 ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 52 ಎಸ್‌ಆರ್‌ಆರ್ 99.
3) ದಿನಾಂಕ 11.7.2003ರ ಸರ್ಕಾರಿ ಆದೇಶ ಸಂಖ್ಯೆ: ಮಮಇ 107 ಪಿಹೆಚ್‌ಪಿ 2003.
4) ದಿನಾಂಕ 3.9.2005 ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000.
5) ದಿನಾಂಕ 13.9.2005 ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 104 ಎಸ್‌ಆರ್‌ಆರ್ 2005.
6) ದಿನಾಂಕ 8.9.2005 ರ ಅಂಗವಿಕಲರ ಅಧಿನಿಯಮದ ಆಯುಕ್ತರ ಕಛೇರಿ ಅ.ಸ.ಪತ್ರ ಸಂಖ್ಯೆ:ಅಂಅನಿ/ಕಲಂ62/13/05-06/577.

ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರ ನಿಯಮ 9 (1A) ರನ್ವಯ ರಾಜ್ಯ ಸಿವಿಲ್ ಸೇವೆಗಳಲ್ಲಿನ ಗ್ರೂಪ್ "ಸಿ" ಮತ್ತು ಗ್ರೂಪ್ "ಡಿ" ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಶೇಕಡಾ 5 ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದೆ. ಸದರಿ ನಿಯಮಗಳ ನಿಯಮ 2 (1) (ಎಲ್‌ಎಲ್) ರಲ್ಲಿ "ಅಂಗವಿಕಲ ಅಭ್ಯರ್ಥಿ" ಯನ್ನು ಪರಿಭಾಷಿಸಲಾಗಿದೆ.

2) ಉಲ್ಲೇಖ (1) ರ ಅಧಿಕೃತ ಜ್ಞಾಪನದಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿನ ಗ್ರೂಪ್ "ಸಿ" ಮತ್ತು ಗ್ರೂಪ್ "ಡಿ" ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಮೀಸಲಾಗಿರುವ ಹುದ್ದೆಗಳಿಗೆ ಅಂಗವಿಕಲ ಅಭ್ಯರ್ಥಿಗಳನ್ನು ಪರಿಗಣಿಸಲು ವೈದ್ಯಕೀಯ ಪ್ರಮಾಣ ಪತ್ರದ ನಮೂನೆಯನ್ನು ನಿಗದಿಪಡಿಸಿ ಮಾರ್ಗಸೂಚನೆಗಳನ್ನು ನೀಡಲಾಗಿದೆ.

3) The persons with disabilities (Equal opportunities, protection of Rights and Full participation) Act, 1995 ದಿನಾಂಕ 1.1.1996 ರಿಂದ ಜಾರಿಗೆ ಬಂದಿದೆ. ಈ ಅಧಿನಿಯಮದ ಸೆಕ್ಷನ್ 32 ರಲ್ಲಿ ಸರ್ಕಾರಕ್ಕೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಉಲ್ಲೇಖ (2) ರ ದಿನಾಂಕ 29-11-2002 ರ ಅಧಿಸೂಚನೆಯಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿನ ಗ್ರೂಪ್ "ಸಿ" ಮತ್ತು ಗ್ರೂಪ್ "ಡಿ" ಹುದ್ದೆಗಳಲ್ಲಿ ಅಂಗವಿಕಲರುಗಳು ನಿರ್ವಹಿಸಬಹುದಾದ ಹುದ್ದೆಗಳನ್ನು ಇಲಾಖಾವಾರು ಗುರುತಿಸಿ ಅಧಿಸೂಚಿಸಲಾಗಿದೆ.

4) ಮೇಲ್ಕಂಡ ಅಧಿನಿಯಮದನ್ವಯ ಉಲ್ಲೇಖ (4) ರ ದಿನಾಂಕ 3.9.2005ರ ಅಧಿಸೂಚನೆಯಲ್ಲಿ ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರ ನಿಯಮ 9 (1A) ಗೆ ತಿದ್ದುಪಡಿ ಮಾಡಿ ರಾಜ್ಯ ಸಿವಿಲ್ ಸೇವೆಗಳಲ್ಲಿನ ಗ್ರೂಪ್-ಎ ಮತ್ತು ಗ್ರೂಪ್-ಬಿ ವೃಂದಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಶೇಕಡಾ 3 ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದೆ ಮತ್ತು ಮೇಲ್ಕಂಡ ನಿಯಮಗಳ ನಿಯಮ 2 (1) (ಎಲ್‌ಎಲ್) ಗೆ ತಿದ್ದುಪಡಿ ಮಾಡಿ "ಅಂಗವಿಕಲ" ಪದದ ಅರ್ಥವನ್ನು ವ್ಯಾಪಕವಾಗಿ ವಿವರಿಸಲಾಗಿದೆ.

5) ಉಲ್ಲೇಖ (5)ರ ಸರ್ಕಾರಿ ಅಧಿಸೂಚನೆಯಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿನ ಗ್ರೂಪ್-ಎ ಮತ್ತು ಗ್ರೂಪ್-ಬಿ ವೃಂದಗಳಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಇಲಾಖಾವಾರು ಗುರುತಿಸಿ ಅಧಿಸೂಚಿಸಲಾಗಿದೆ.

6) ಉಲ್ಲೇಖ (3) ರ ದಿನಾಂಕ 11.7.2003 ರ ಸರ್ಕಾರಿ ಆದೇಶದಲ್ಲಿ ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚನೆಗಳ ಪ್ರಕಾರ ವಿವಿಧ ಬಗೆಯ ಅಂಗವಿಕಲತೆಗಳನ್ನು ಗುರುತಿಸಿ ಅಂಗವಿಕಲತೆ ಪ್ರಮಾಣ ಪತ್ರ ನೀಡಲು ಪ್ರತಿ ಜಿಲ್ಲೆಯಲ್ಲಿ ವೈದ್ಯಕೀಯ ಮಂಡಳಿಯನ್ನು ರಚಿಸಲಾಗಿದೆ.

7) ಉಲ್ಲೇಖ (6) ರ ದಿನಾಂಕ 8.9.2005 ರ ಅಂಗವಿಕಲರ ಅಧಿನಿಯಮದ ಆಯುಕ್ತರ ಪತ್ರದಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಮೀಸಲಾಗಿರುವ ಹುದ್ದೆಗಳಿಗೆ ಅಂಗವಿಕಲ ಅಭ್ಯರ್ಥಿಗಳನ್ನು ಪರಿಗಣಿಸಲು ವೈದ್ಯಕೀಯ ಪ್ರಮಾಣ ಪತ್ರವನ್ನು ಕೇಂದ್ರ ಸರ್ಕಾರವು ನಿಗದಿಪಡಿಸಿರುವಂತೆ ಪರಿಷ್ಕರಿಸಿ ನಿಗದಿಪಡಿಸುವಂತೆ ಕೋರಿರುತ್ತಾರೆ.

8) ಮೇಲ್ಕಂಡ ಹಿನ್ನೆಲೆಯಲ್ಲಿ, ದಿನಾಂಕ 13.9.1995 ರ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 7 ಸೇಸ್ಥಅ 94 ರಲ್ಲಿ ಅಂಗವಿಕಲರಿಗೆ ಮೀಸಲಿರಿಸಲಾಗಿರುವ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ಪರಿಗಣಿಸಲು ನಿಗದಿಪಡಿಸಿದ್ದ ವೈದ್ಯಕೀಯ ಪ್ರಮಾಣ ಪತ್ರದ ನಮೂನೆ ಹಾಗೂ ಸೂಚನೆಗಳನ್ನು ಹಿಂತೆಗೆದುಕೊಳ್ಳಲಾಗಿದೆ.

9) ಲೋಕಸೇವಾ ಆಯೋಗ ಮತ್ತು ಇತರ ನೇಮಕಾತಿ ಪ್ರಾಧಿಕಾರಗಳು ಅಂಗವಿಕಲರಿಗಾಗಿ ಮೀಸಲಾಗಿರುವ ಹುದ್ದೆಗಳನ್ನು ತುಂಬಲು ಅರ್ಜಿಗಳನ್ನು ಕರೆದಾಗ ಅರ್ಜಿ ಸಲ್ಲಿಸುವ ಅಂಗವಿಕಲ ಅಭ್ಯರ್ಥಿಗಳು ಈ ಅಧಿಕೃತ ಜ್ಞಾಪನಕ್ಕೆ ಲಗತ್ತಿಸಿರುವ ವೈದ್ಯಕೀಯ ಪ್ರಮಾಣ ಪತ್ರದಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವನ್ನು ಪಡೆದು ಅದರ ಪ್ರತಿಯನ್ನು ಅರ್ಜಿಗಳಿಗೆ ಲಗತ್ತಿಸಬೇಕು. ಆಯ್ಕೆಯಾದ ಪಕ್ಷದಲ್ಲಿ ಅದರ ಮೂಲಪ್ರತಿಯನ್ನು ನೇಮಕಾತಿ ಪ್ರಾಧಿಕಾರಗಳಿಗೆ ಸಲ್ಲಿಸಬೇಕು.

**ದೇವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–1).

**ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೆನೆನಿ 2005, ದಿನಾಂಕ 19ನೇ ನವೆಂಬರ್ 2005**

**CERTIFICATE FOR THE PERSONS WITH DISABILITIES**

This is to certify that Sri/Smt/Kum…………………………………………son/wife/daughter of Shri…………………………………………Age………………old, male/female, Registration No…………………………is a case of ………………………………………………………. He/She is physically disabled/visual disabled/speech & hearing disabled and has ……….%(…………………percent) permanent (physical impairment/visual impairment speech & hearing impairment) in relation to his/her……………………………..

**Note:**

1. This condition is progressive/non-progressive/likely to improve/not likely to improve.*
2. Re-assessment is not recommended/is recommended after a period of ………....................…… months/years.*

*Strike out which is not applicable.

| | | | |
|---|---|---|---|
| (Recent Attested Photograph showing the disability affixed here). | Sd/-<br>(DOCTOR)<br>(Seal) | Sd/-<br>(DOCTOR)<br>(Seal) | Sd/-<br>(DOCTOR)<br>(Seal) |

Countersigned by the
Medical Superintendent CMO/Head of Hospital(with seal)

Signature/Thumb impression of
the disabled person.
P.R. 1615

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ವೃತ್ತಿನಿರತ ಹಾಗೂ ಆಶ್ರಯ ಇಲ್ಲದ ಕುಶಲಕರ್ಮಿಗಳಿಗೆ ವಸತಿ ಕಾರ್ಯಾಗಾರಗಳನ್ನು ನೀಡಲು ರಾಜ್ಯದಲ್ಲಿ ಕಾಯಕನಗರ ಯೋಜನೆ ಅನುಷ್ಠಾನ - ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ಕೈವಾ:ವಿಶ್ವ:ಕಾಯಕನಗರ:ಎ2:99-2000, ದಿನಾಂಕ:15.6.99.
2. ಸರ್ಕಾರಿ ಆದೇಶ ಸಂಖ್ಯೆ:ಸಿಐ56ಸಪ್ರಕೈ99, ಬೆಂಗಳೂರು, ದಿನಾಂಕ:30.3.2000.
3. ದಿನಾಂಕ:16.5.2005 ಮತ್ತು 1.6.2005ರಂದು ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ನಡೆದ ಸಭಾ ನಡವಳಿಗಳು.

**ಪ್ರಸ್ತಾವನೆ:**

1999-2000ನೇ ಸಾಲಿನಲ್ಲಿ ಹೊಸ ಯೋಜನೆಗಳನ್ವಯವಾಗಿ ವೃತ್ತಿನಿರತ ಹಾಗೂ ಆಶ್ರಯವಿಲ್ಲದ ಕುಶಲಕರ್ಮಿಗಳು ತಮ್ಮ ನಿತ್ಯಜೀವನ ಉಪಯೋಗಕ್ಕಾಗಿ ನಗರದ ರಸ್ತೆ ಬದಿಗಳಲ್ಲಿ ವೃತ್ತಿಯನ್ನು ಮುಂದುವರೆಸಿ ಜೀವನ ಸಾಗಿಸುತ್ತಿದ್ದು, ನಗರದ ಕುಶಲಕರ್ಮಿಗಳಿಗೆ ಪುನರ್ವಸತಿ ಸೌಲಭ್ಯವನ್ನು ನಗರದ ಹತ್ತಿರದಲ್ಲಿರುವ ಪ್ರತ್ಯೇಕವಾದ ಸ್ಥಳದಲ್ಲಿ ಎಲ್ಲಾ ಸೌಲಭ್ಯಗಳನ್ನೊಳಗೊಂಡ ವ್ಯವಸ್ಥೆಯನ್ನು ಕಲ್ಪಿಸಲು ಕಾಯಕನಗರ ಎಂಬ ಹೊಸ ಯೋಜನೆಯನ್ನು ರೂಪಿಸಲಾಗಿದೆ. ಈ ಯೋಜನೆಯಡಿಯಲ್ಲಿ ವಿವಿಧ ಕಸುಬುಗಳಲ್ಲಿ ವೃತ್ತಿನಿರತ ಕಸುಬುದಾರರಿಗೆ ಮೂಲಸೌಕರ್ಯವಾದ ನೀರು, ವಿದ್ಯುತ್‌ಶಕ್ತಿ, ರಸ್ತೆ ಇತ್ಯಾದಿಗಳನ್ನು ಅಭಿವೃದ್ಧಿಪಡಿಸಿ ಸೂಕ್ತವಾದ ನಿವೇಶನಗಳನ್ನು ಒದಗಿಸಿ ಅದರಲ್ಲಿ ವಸತಿ ಮತ್ತು ಕಾರ್ಯಾಗಾರಗಳನ್ನು ಕಟ್ಟಿಸಿಕೊಳ್ಳಲು ಅನುವಾಗುವಂತೆ ವಿವಿಧ ಹಣಕಾಸು ಸಂಸ್ಥೆಗಳಿಂದ ಸಾಲ ಸೌಲಭ್ಯಗಳನ್ನು ಒದಗಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು.

ಈ ಯೋಜನೆಯಡಿಯಲ್ಲಿ ಪ್ರತಿ ಘಟಕಕ್ಕೆ ರೂ.66,000 ಘಟಕ ವೆಚ್ಚ ನಿಗಧಿಪಡಿಸಿದ್ದು ಇದರಲ್ಲಿ ರೂ.40,000 ವಸತಿ ಮತ್ತು ಕಾರ್ಯಾಗಾರ ನಿರ್ಮಿಸಲು ಹಾಗೂ ರೂ.26,000 ನಿವೇಶನಕ್ಕಾಗಿ ನಿಗಧಿಪಡಿಸಲಾಗಿತ್ತು. ಇದರಲ್ಲಿ ಶೇ.60 ರಷ್ಟು ಸಹಾಯಧನ ರೂಪವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಹಾಗೂ ಶೇ.40 ರಷ್ಟು ಇತರೆ ವರ್ಗದವರಿಗೆ ನಿಗಧಿಪಡಿಸಲಾಗಿತ್ತು. ಉಳಿದ ಹಣವನ್ನು ಫಲಾನುಭವಿಗಳು ಬ್ಯಾಂಕ್ ಮೂಲಕ ಸಾಲವನ್ನು ಪಡೆಯುವ ಷರತ್ತಿಗೊಳಪಟ್ಟು ಸಹಾಯಧನ ಮಂಜೂರು ಮಾಡಲು ತೀರ್ಮಾನಿಸಲಾಗಿತ್ತು.

ಈ ಯೋಜನೆಯನ್ನು ಕೆಳಕಂಡ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸುವ ಬಗ್ಗೆ ಇದುವರೆಗೂ ಆಗಿರುವ ಪ್ರಗತಿ ಕೆಳಕಂಡಂತೆ ಇರುತ್ತದೆ:

1. ಧಾರವಾಡ ಜಿಲ್ಲೆಯ ನರೇಂದ್ರ ಗ್ರಾಮದಲ್ಲಿ ಒಟ್ಟು 35.24 ಎಕರೆ ಭೂಮಿಯನ್ನು ಗುರುತಿಸಿದ್ದು, ಭೂಮಿಯ ಒಟ್ಟು ಬೆಲೆ ರೂ.107.482 ಲಕ್ಷಗಳಾಗಿದ್ದು, ಕರ್ನಾಟಕ ರಾಜ್ಯ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಮೂಲಕ ಭೂಮಿಯನ್ನು ಈಗಾಗಲೇ ಸ್ವಾಧೀನಪಡಿಸಿಕೊಂಡಿದ್ದು ಇದಕ್ಕಾಗಿ ರೂ.107.482 ಲಕ್ಷಗಳನ್ನು ಕೆ.ಐ.ಎ.ಡಿ.ಬಿ.ಗೆ ಬಿಡುಗಡೆ ಮಾಡಲಾಗಿದೆ.
2. ಬೆಳಗಾವಿ ಜಿಲ್ಲೆಯ ರಾಮದುರ್ಗದಲ್ಲಿ ಒಟ್ಟು 5.50 ಎಕರೆ ಭೂಮಿಯನ್ನು ಗುರುತಿಸಿದ್ದು, ಭೂಮಿಯ ಬೆಲೆ ಒಟ್ಟು ರೂ.10.62 ಲಕ್ಷಗಳಾಗಿದ್ದು, ಈಗಾಗಲೇ ಕೆ.ಎಸ್.ಎಸ್.ಐ.ಡಿ.ಸಿ.ಗೆ ಭೂಮಿಯ ವೆಚ್ಚವನ್ನು ಬಿಡುಗಡೆ ಮಾಡಲಾಗಿದ್ದು, ರೂ.9.38 ಲಕ್ಷಗಳನ್ನು ಕೆ.ಐ.ಎ.ಡಿ.ಬಿ.ಗೆ ಭೂಅಭಿವೃದ್ಧಿ ಪಡಿಸಲು ಬಿಡುಗಡೆ ಮಾಡಲಾಗಿದೆ.
3. ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿಯಲ್ಲಿ ಒಟ್ಟು 17.20 ಎಕರೆ ಭೂಮಿಯನ್ನು ಗುರುತಿಸಿದ್ದು, ರೂ.19,10,920/-ಗಳನ್ನು ಜಮೀನು ಖರೀದಿ ಮಾಡುವ ಸಲುವಾಗಿ ಹಾಗೂ ರೂ.10,89,080/-ಗಳನ್ನು ಭೂಅಭಿವೃದ್ಧಿ ಪಡಿಸಲು ಕೆ.ಐ.ಎ.ಡಿ.ಬಿ.ಗೆ ಬಿಡುಗಡೆ ಮಾಡಲಾಗಿದೆ.
4. ಬಾಗಲಕೋಟೆ ಜಿಲ್ಲೆಯ ಇಳಕಲ್, ಬೀಳಗಿ, ಕೂಡಲ ಸಂಗಮ ಹಾಗೂ ಜಮಖಂಡಿಯಲ್ಲಿ ಭೂಮಿಯನ್ನು ಗುರುತಿಸಿದ್ದು, ಭೂಮಿ ಸ್ವಾಧೀನಪಡಿಸಿ ಕೊಳ್ಳುವ ಹಂತದಲ್ಲಿದೆ.
5. ಬೀದರ್ ಜಿಲ್ಲೆಯ ಬಸವಕಲ್ಯಾಣದಲ್ಲಿ 17 ಎಕರೆ ಜಮೀನನ್ನು ಗುರುತಿಸ ಲಾಗಿದ್ದು, ಭೂಸ್ವಾಧೀನಪಡಿಸಿಕೊಳ್ಳುವ ಹಂತದಲ್ಲಿದೆ.

ಆಯವ್ಯಯದಲ್ಲಿ ಹಣಕಾಸು ಕೊರತೆಯಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ವಿಳಂಬವಾಗಿದ್ದು ಬದಲಾದ ಪರಿಸ್ಥಿತಿಯಲ್ಲಿ ಕುಶಲಕರ್ಮಿಗಳ ಪುನರ್ ಸಮೀಕ್ಷೆ ನಡೆಸಿ ಸದ್ಯದ ಪರಿಸ್ಥಿತಿಗೆ ಅನುಗುಣವಾಗಿ ಹಾಗೂ ಅವಶ್ಯಕತೆಗೆ ತಕ್ಕಂತೆ ಯೋಜನೆಯ ಸ್ವರೂಪವನ್ನು ಸಂಪೂರ್ಣವಾಗಿ ಬದಲಾವಣೆ ಮಾಡಿ, ಮಾರ್ಗಸೂಚಿಯಲ್ಲಿ ಕೆಲವೊಂದು ಬದಲಾವಣೆ ಮಾಡಲು ತೀರ್ಮಾನಿಸಲಾಯಿತು. ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ಹಾಗೂ ನಬಾರ್ಡ್ ಸಂಸ್ಥೆಗಳೊಂದಿಗೆ ಕಾರ್ಯಕ್ರಮದ ಅನುಷ್ಠಾನದ ಬಗ್ಗೆ ಚರ್ಚಿಸಲಾಯಿತು. ವಸತಿ ಮತ್ತು ಕಾರ್ಯಾಗಾರ ಕಟ್ಟಡದ ನಕಾಶೆಯನ್ನು ಹಾಗೂ ಅಂದಾಜು ಪಟ್ಟಿಗಳನ್ನು ಸಹ ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ತಯಾರಿಸಿ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಹಲವಾರು ಸಭೆಗಳನ್ನು ನಡೆಸಿ ಈ ಹಿಂದೆ ಹೊರಡಿಸಿರುವ ಸರ್ಕಾರಿ ಆದೇಶಗಳಿಗೆ ಕೆಲವೊಂದು ಮಾರ್ಪಾಡು ಮಾಡಿ ಪರಿಷ್ಕೃತ ಸರ್ಕಾರಿ ಆದೇಶವನ್ನು ಹೊರಡಿಸಲು ತೀರ್ಮಾನಿಸಲಾಯಿತು.

ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಿಐ65ಸಪ್ರಕೈ2005, ಬೆಂಗಳೂರು, ದಿ:15ನೇ ನವೆಂಬರ್ 2005**
**ಯೂನಿಕ್ ಕ್ರಮ ಸಂಖ್ಯೆ:75/2005**

ಪ್ರಸ್ತಾವನೆಯಲ್ಲಿ ತಿಳಿಸಿದಂತೆ ಒಟ್ಟು 5 ಜಿಲ್ಲೆಗಳ 8 ಸ್ಥಳಗಳಲ್ಲಿ ಕಾಯಕನಗರ ಯೋಜನೆಯನ್ನು ಅನುಷ್ಠಾನಗೊಳಿಸಲು ತೀರ್ಮಾನಿಸಿ, ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ಕೆಳಕಂಡ ಅಂಶಗಳ ಪ್ರಕಾರ ಮಾರ್ಪಡಿಸಿ ಆದೇಶ ಹೊರಡಿಸಲಾಗಿದೆ:

1. ಮೊದಲ ಹಂತದಲ್ಲಿ ಧಾರವಾಡ ಜಿಲ್ಲೆಯ ನರೇಂದ್ರ ಗ್ರಾಮ, ಬೆಳಗಾಂ ಜಿಲ್ಲೆಯ ರಾಮದುರ್ಗ ಹಾಗೂ ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿಯಲ್ಲಿ ಕಾಯಕನಗರ ಯೋಜನೆಯನ್ನು ಅನುಷ್ಠಾನಗೊಳಿಸಲು ಹಾಗೂ ಎರಡನೇ ಹಂತದಲ್ಲಿ ಉಳಿದ 2 ಜಿಲ್ಲೆಗಳಾದ ಬೀದರ್ ಮತ್ತು ಬಾಗಲಕೋಟೆಯಲ್ಲಿ ಕಾಯಕನಗರ ಕಾರ್ಯಕ್ರಮ ಅನುಷ್ಠಾನಗೊಳಿಸುವುದು.
2. ಸಿಡಾಕ್ ಮತ್ತು ಜಿಲ್ಲಾ ಕೈಗಾರಿಕೆ ಕೇಂದ್ರದವರು ಕುಶಲಕರ್ಮಿಗಳು ಪುನರ್ ಸಮೀಕ್ಷೆ ನಡೆಸಿದ್ದು ಅದರಂತೆ ನರೇಂದ್ರ ಗ್ರಾಮದಲ್ಲಿ 411 ಕುಶಲಕರ್ಮಿಗಳಿಗೆ, ರಾಮದುರ್ಗದಲ್ಲಿ 57 ಕುಶಲಕರ್ಮಿಗಳಿಗೆ ಹಾಗೂ ಹೂವಿನಹಡಗಲಿಯಲ್ಲಿ 89 ಕುಶಲಕರ್ಮಿಗಳಿಗೆ ವಸತಿ ಮತ್ತು ಕಾರ್ಯಾಗಾರಗಳನ್ನು ನಿರ್ಮಿಸುವುದು.
3. ಈ ಯೋಜನೆಯಡಿಯಲ್ಲಿ ವೃತ್ತಿನಿರತ ಕುಶಲಕರ್ಮಿಗಳಿಗೆ 30' x 40' ನಿವೇಶನವನ್ನು ಪುಕ್ಕಟೆಯಾಗಿ ಹಂಚುವುದು.
4. ಪ್ರತಿ 275 sq.ft. ವಸತಿ ಕಾರ್ಯಾಗಾರ ಕಟ್ಟಲು ರೂ.60,000ಗಳಿಂದು ಘಟಕ ವೆಚ್ಚ ನಿಗದಿಪಡಿಸಲಾಗಿದೆ. ಇದರಲ್ಲಿ ಶೇ.60 ರಷ್ಟು ಅಂದರೆ ರೂ.36,000 ಗಳನ್ನು ಸಹಾಯಧನ ರೂಪವಾಗಿ ಪರಿಶಿಷ್ಟ ಜಾತಿ / ವರ್ಗದವರಿಗೆ ಹಾಗೂ ಶೇ.40 ರಷ್ಟು ಅಂದರೆ ರೂ.24,000ಗಳನ್ನು ಇತರ ವರ್ಗಕ್ಕೆ ಸೇರಿದವರಿಗೆ ನಿಗದಿಪಡಿಸಲಾಗಿದೆ.
5. ವಸತಿ ಮತ್ತು ಕಾರ್ಯಾಗಾರ ನಿರ್ಮಾಣಕ್ಕೆ ಬೇಕಾಗುವ ಉಳಿದ ಅನುದಾನವನ್ನು ಪರಿಶಿಷ್ಟ ಜಾತಿ / ವರ್ಗದವರಿಗೆ ರೂ.24,000ಗಳ ಸಾಲವನ್ನು ಹಾಗೂ ಇತರೆ ವರ್ಗಗಳಿಗೆ ಸೇರಿದ ಕುಶಲಕರ್ಮಿಗಳಿಗೆ ರೂ.36,000ಗಳನ್ನು (ರೂ.11,000 ಹೆಚ್ಚುವರಿ ಸಾಲ) ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ಇವರಿಂದ ಭರಿಸುವುದು ಹಾಗೂ ಜಿಲ್ಲಾ ಕೈಗಾರಿಕಾ ಕೇಂದ್ರದವರು ಕುಶಲಕರ್ಮಿಗಳಿಂದ ಸಾಲ ವಸೂಲಿ ಮಾಡಲು ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ಸಂಸ್ಥೆಗೆ ಸಹಕರಿಸುವುದು.
6. ಉದ್ದೇಶಿತ ಕುಶಲಕರ್ಮಿಗಳ ಸಂಕೀರ್ಣದಲ್ಲಿ ಕುಶಲಕರ್ಮಿಗಳಿಗೆ ಅವಶ್ಯಕತೆಗೆ ತಕ್ಕಂತೆ ಕೆಳಕಂಡ ಸೌಲಭ್ಯಗಳನ್ನು ನೀಡಲು ತೀರ್ಮಾನಿಸಲಾಯಿತು:
   - i) ಸಾಮೂಹಿಕ ಸೌಲಭ್ಯ ಕೇಂದ್ರ
   - ii) ಉಪಕರಣಗಳು ಮತ್ತು ಯಂತ್ರೋಪಕರಣಗಳ ಸರಬರಾಜು
   - iii) ಉತ್ಪಾದನೆ ಮಾಡಿದ ವಸ್ತುಗಳ ಪ್ರದರ್ಶನ ಮಳಿಗೆ
   - iv) ಕುಶಲತೆ ಅಭಿವೃದ್ಧಿಗೆ ತರಬೇತಿ
   - v) ಮೂಲಭೂತ ಸೌಕರ್ಯಗಳಾದ ರಸ್ತೆ, ನೀರು ಸರಬರಾಜು, ವಿದ್ಯುತ್ ಸೌಲಭ್ಯ, ಒಳಚರಂಡಿ ಮತ್ತು ಮಳೆ ನೀರು ಸಂಗ್ರಹಣೆ ವ್ಯವಸ್ಥೆಗಳನ್ನು ಕಲ್ಪಿಸುವುದು.

7. ವಸತಿ ಮತ್ತು ಕಾರ್ಯಗಾರಗಳನ್ನು ನಿರ್ಮಿಸುವ ಜವಾಬ್ದಾರಿಯನ್ನು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ಇವರಿಗೆ ವಹಿಸುವುದು.
8. ಮೂಲಭೂತ ಸೌಕರ್ಯಗಳಾದ ರಸ್ತೆ, ನೀರು ಸರಬರಾಜು, ವಿದ್ಯುತ್ ಸೌಲಭ್ಯ, ಒಳಚರಂಡಿ ಮತ್ತು ಮಳೆ ನೀರು ಸಂಗ್ರಹಣೆ ವ್ಯವಸ್ಥೆಗಳನ್ನು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕಾಭಿವೃದ್ಧಿ ನಿಗಮದ ಮೂಲಕ ಕಲ್ಪಿಸುವುದು ಹಾಗೂ ಇದಕ್ಕೆ ತಗಲುವ ವೆಚ್ಚವನ್ನು ಸರ್ಕಾರದಿಂದ ಭರಿಸುವುದು.
9. ಕೆ.ಐ.ಎ.ಡಿ.ಬಿ.ಯವರು ವಶಪಡಿಸಿಕೊಂಡ ಜಮೀನನ್ನು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕಾಭಿವೃದ್ಧಿ ನಿಗಮಕ್ಕೆ ಹಸ್ತಾಂತರಿಸುವುದು.
10. ಮೂಲಭೂತ ಸೌಲಭ್ಯ ಅಭಿವೃದ್ಧಿಗಾಗಿ ಅವಶ್ಯವಿರುವ ರೂ.345.75 ಲಕ್ಷಗಳ ಅನುದಾನವನ್ನು ನಬಾರ್ಡ್ ಸಂಸ್ಥೆಯ ಆರ್.ಐ.ಡಿ.ಎಫ್ ಯೋಜನೆಯಡಿಯಲ್ಲಿ ಸಿಗಬಹುದಾದಂತಹ ಹಣಕಾಸು ನೆರವನ್ನು ಕೆ.ಎಸ್.ಎಸ್.ಐ.ಡಿ.ಸಿ.ರವರು ಪಡೆದು ಅನುಷ್ಠಾನಗೊಳಿಸುವುದು.
11. ವಿದ್ಯುತ್ ಮೂಲಭೂತ ಸೌಕರ್ಯವನ್ನು ರಾಜೀವ್‌ಗಾಂಧಿ ಗ್ರಾಮೀಣ ವಿದ್ಯುದ್ದೀಕರಣ ಯೋಜನೆಯಡಿಯಲ್ಲಿ ಇರುವ ಸೌಲಭ್ಯವನ್ನು ಪಡೆದು ಒದಗಿಸುವುದು.
12. ಯೋಜನೆಯಡಿಯಲ್ಲಿ ನಿರ್ಮಿಸಿದ ಕುಶಲಕರ್ಮಿ ಸಂಕೀರ್ಣದ ನಿರ್ವಹಣೆಯನ್ನು ಸ್ವಸಹಾಯ ಗುಂಪುಗಳು ಅಥವಾ ಜಿಲ್ಲೆಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರೇತರ ಸಂಸ್ಥೆಯನ್ನು ಗುರುತಿಸಿ, ನಿರ್ವಹಣೆಯ ಕಾರ್ಯವಹಿಸಿಕೊಡುವುದು.
13. ಈ ಯೋಜನೆಗೆ ತಗಲುವ ಅಂದಾಜು ವೆಚ್ಚ ಕೆಳಕಂಡಂತಿರುತ್ತದೆ:

(ರೂ. ಲಕ್ಷಗಳಲ್ಲಿ)

| ಕ್ರ.ಸಂ | ಯೋಜನೆಯ ವಿವರ | ನರೇಂದ್ರಗ್ರಾಮ | ರಾಮದುರ್ಗ | ಹೂವಿನಡಗಲಿ |
|---|---|---|---|---|
| 1 | ಭೂಮಿ ವೆಚ್ಚ | 107.48 | 10.62 | 19.11 |
| 2 | ಭೂಮಿ ಅಭಿವೃದ್ಧಿ ವೆಚ್ಚ | 200.00 | 28.00 | 64.00 |
| 3 | ವಸತಿ ಮತ್ತು ಕಾರ್ಯಗಾರದ ವೆಚ್ಚ | 246.60 | 34.20 | 53.40 |
| 4 | ಸಾಮೂಹಿಕ ಸೌಲಭ್ಯ ಕೇಂದ್ರದ ವೆಚ್ಚ | 20.25 | - | 12.00 |
| 5 | ಉತ್ಪನ್ನಗಳ ಪ್ರದರ್ಶನ ಕೇಂದ್ರದ ವೆಚ್ಚ | 9.50 | 2.50 | 9.50 |
| | **ಒಟ್ಟು** | **583.83** | **75.32** | **158.01** |

14. ಕಾಯಕನಗರ ಯೋಜನೆಯನ್ನು ಅನುಷ್ಠಾನಗೊಳಿಸಲು ಹಣಕಾಸು ಈ ಕೆಳಕಂಡಂತೆ ಭರಿಸುವುದು:

(ರೂ. ಲಕ್ಷಗಳಲ್ಲಿ)

| ಕ್ರ. ಸಂ | ವಿವರ | ಒಟ್ಟು ಯೋಜನಾ ವೆಚ್ಚ | ಹಣಕಾಸಿನ ಮೂಲ |
|---|---|---|---|
| 1 | ಭೂಮಿ ವೆಚ್ಚ | 137.21 | ಹಿಂದಿನ ವರ್ಷಗಳ ಆಯವ್ಯಯದಿಂದ ಈಗಾಗಲೇ ಅನುದಾನ ಬಿಡುಗಡೆ ಮಾಡಲಾಗಿದೆ. |
| 2 | ಭೂಮಿ ಅಭಿವೃದ್ಧಿ ವೆಚ್ಚ | 292.00 | ಕೆ.ಎಸ್.ಎಸ್.ಐ.ಡಿ.ಸಿ ಮೂಲಕ ನಬಾರ್ಡ್‌ನ RIDF ಯೋಜನೆಯಡಿಯಲ್ಲಿ ಭರಿಸುವುದು. |
| 3 | ವಸತಿ ಮತ್ತು ಕಾರ್ಯಾಗಾರ | 334.20 | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಶೇ.೬೦ ಸಹಾಯಧನವನ್ನು ಹಾಗೂ ಇತರೆ ವರ್ಗಕ್ಕೆ ಸೇರಿದವರಿಗೆ ಶೇ.೪೦ ರಷ್ಟು ಸಹಾಯಧನವನ್ನು ಆಯುವ್ಯಯ ಮೂಲದಿಂದ ಭರಿಸುವುದು ಹಾಗೂ ಉಳಿದ ಸಾಲವನ್ನು ಕುಶಲಕರ್ಮಿಗಳಿಗೆ ರಾಜೀವ್‌ಗಾಂಧಿ ವಸತಿ ನಿಗಮದ ಮೂಲಕ ಒದಗಿಸುವುದು. |
| 4 | ಸಾಮೂಹಿಕ ಸೌಲಭ್ಯ ಕೇಂದ್ರ | 32.25 | ಕೆ.ಎಸ್.ಎಸ್.ಐ.ಡಿ.ಸಿ ಮೂಲಕ ನಬಾರ್ಡ್ RIDF ಯೋಜನೆಯಡಿಯಲ್ಲಿ ಭರಿಸುವುದು. |
| 5 | ಉತ್ಪನ್ನ ಪ್ರದರ್ಶನ ಕೇಂದ್ರ | 21.50 | ಕೆ.ಎಸ್.ಎಸ್.ಐ.ಡಿ.ಸಿ ಮೂಲಕ ನಬಾರ್ಡ್‌ನ RIDF ಯೋಜನೆಯಡಿಯಲ್ಲಿ ಭರಿಸುವುದು. |
| | **ಒಟ್ಟು** | **817.16** | |

ಈ ಆದೇಶವನ್ನು, ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ1504-ವೆಚ್ಚ-1/2005, ದಿನಾಂಕ:27.10.2005ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವೀರಣ್ಣ**

ಪೀಠಾಧಿಕಾರಿ (ಸಪ್ರಕೈ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1626

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಹೆಚ್. ಶ್ರೀನಿವಾಸ್, ಸಹಾಯಕ ಔಷಧ ನಿಯಂತ್ರಕರು, ಬೆಂಗಳೂರು ವೃತ್ತ-1, ಔಷಧ ನಿಯಂತ್ರಣ ಇಲಾಖೆ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:**
1. ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ದಿನಾಂಕ:30.10.2005 ರಂದು ಪ್ರಕಟಗೊಂಡ ವರದಿ.
2. ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಟಿಪ್ಪಣಿ ಸಂಖ್ಯೆ: ಎಂ.ಹೆಚ್.ಎಫ್.ಡಬ್ಲ್ಯೂ./8599/05 ದಿನಾಂಕ: 7.11.2005.
3. ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಔನಿಇ/74/ವೈವಿ/2005-06, ದಿನಾಂಕ: 18.11.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ 1ರಲ್ಲಿನ ದಿನಾಂಕ: 30.10.2005ರ ಕನ್ನಡ ಪ್ರಭ ದಿನಪತ್ರಿಕೆಯಲ್ಲಿ "ನಕಲಿ ಔಷಧ ತನಿಖೆ ದುರ್ಬಲಗೊಳಿಸಲು ಸರ್ಕಾರದಿಂದಲೇ ಯತ್ನ" ಎಂಬ ಶಿರೋನಾಮೆಯಲ್ಲಿ ಔಷಧ ನಿಯಂತ್ರಣ ಇಲಾಖೆಯ ಕಾರ್ಯವೈಖರಿಯ ಬಗ್ಗೆ ಪ್ರಕಟಗೊಂಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ 2ರಲ್ಲಿನ ಟಿಪ್ಪಣಿಯಲ್ಲಿ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು, ದಿನಪತ್ರಿಕೆಯಲ್ಲಿ ಪ್ರಕಟವಾಗಿರುವ ವರದಿಯಲ್ಲಿನ ಅಂಶಗಳ ಬಗ್ಗೆ ಔಷಧ ನಿಯಂತ್ರಣ ಇಲಾಖೆಯ ಸೂಕ್ತ ಅಧಿಕಾರಿಯಿಂದ ಸಮಗ್ರವಾದ ವಿಚಾರಣೆ ನಡೆಸಿ ವರದಿ ನೀಡಲು ಆದೇಶಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ 3ರಲ್ಲಿನ ಪತ್ರದಲ್ಲಿ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ, ದಿನಾಂಕ: 30.10.2005ರಂದು ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ಪ್ರಕಟಗೊಂಡ ವಿವರಗಳು ಮತ್ತು ಶ್ರೀ ಹೆಚ್. ಶ್ರೀನಿವಾಸ್, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ವೃತ್ತ - 1. ಇವರು ಔಷಧ ನಿಯಂತ್ರಣ ಇಲಾಖೆಯ ಕೇಂದ್ರ ಕಛೇರಿಗೆ ಸಲ್ಲಿಸಿರುವ ವರದಿಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸದರಿ ಅಧಿಕಾರಿಯೇ ಪತ್ರಿಕೆಗೆ ಮಾಹಿತಿ ನೀಡಿರುವರೆಂಬ ಅಭಿಪ್ರಾಯ ಮೂಡಿರುವುದಾಗಿ ವರದಿ ಮಾಡಿರುತ್ತಾರೆ.

ಶ್ರೀ ಹೆಚ್. ಶ್ರೀನಿವಾಸ್, ಸಹಾಯಕ ಔಷಧ ನಿಯಂತ್ರಕರು, ಬೆಂಗಳೂರು ವೃತ್ತ-1, ಬೆಂಗಳೂರು, ಇವರು ಕನ್ನಡ ದಿನ ಪತ್ರಿಕೆಯಲ್ಲಿ ಸರ್ಕಾರದ ಬಗ್ಗೆ ತಪ್ಪು ಅಭಿಪ್ರಾಯ ಬರುವ ರೀತಿಯಲ್ಲಿ ಪತ್ರಿಕೆಗಳಿಗೆ ಮಾಹಿತಿ ನೀಡಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಸದರಿಯವರ ಈ ನಡವಳಿಕೆಯು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3(iii) ರಂತೆ ಸರ್ಕಾರಿ ನೌಕರರ ನಡೆತೆಗೆ ತಕ್ಕದಲ್ಲದ ರೀತಿಯಲ್ಲಿ ವರ್ತಿಸಿರುವುದು ಕಂಡುಬರುತ್ತದೆ.

ಆದ್ದರಿಂದ ಸರ್ಕಾರವು ಸದರಿಯವರ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಅಮಾನತ್ತಿನಲ್ಲಿಟ್ಟು ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಿದೆ, ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಆಕುಕ 172 ಐಎಂಎಂ 2005, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಔಷಧ ನಿಯಂತ್ರಣ ಇಲಾಖೆಯ ಶ್ರೀ ಹೆಚ್. ಶ್ರೀನಿವಾಸ್, ಸಹಾಯಕ ಔಷಧ ನಿಯಂತ್ರಕರು, ಬೆಂಗಳೂರು ವೃತ್ತ-1, ಬೆಂಗಳೂರು, ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ನಿಯಮ 10(1)9(ಡಿ) ರನ್ವಯ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಮಾನತ್ತಿನಲ್ಲಿರಿಸಲಾಗಿದೆ.

ಸದರಿ ಅಧಿಕಾರಿಯು ಅಮಾನತ್ತಿನ ಅವಧಿಯಲ್ಲಿ ಸರ್ಕಾರದ ಪೂರ್ವಾನುಮತಿಯಿಲ್ಲದೇ ಕೇಂದ್ರ ಸ್ಥಾನವನ್ನು ಬಿಡತಕ್ಕದಲ್ಲ. ಸದರಿಯವರು ಅಮಾನತ್ತಿನಲ್ಲಿಡಲಾದ ಅವಧಿಯಲ್ಲಿ ನಿಯಮಾನುಸಾರ ಜೀವನಾಧಾರ ಭತ್ಯೆಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1633

**ಚೋಮಾನಾಯಕ್.ಜಿ**

ಸರ್ಕಾರದ ಉಪ ಕಾರ್ಯದರ್ಶಿ-2, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಡಾ: ವಿಜಯ ಆರ್. ನಾಯ್ಕು, ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಘಟಕ, ಅಂಕೋಲಾ, ಉತ್ತರ ಕನ್ನಡ ಜಿಲ್ಲೆ, ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ (2) 90 : 2003-04 ದಿನಾಂಕ: 20.12.2004.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಡಾ: ವಿಜಯ ಆರ್. ನಾಯ್ಕು, ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಘಟಕ, ಅಂಕೋಲಾ, ಉತ್ತರ ಕನ್ನಡ ಜಿಲ್ಲೆ ಇವರು ದಿನಾಂಕ: 3.10.2003 ರಿಂದ 22.10.2003 ರ ವರೆಗೆ ವೈದ್ಯಕೀಯ ಆಧಾರದ ಮೇಲೆ ಗಳಿಕೆ ರಜೆಯ ಮಂಜೂರಾತಿ ಪಡೆದುಕೊಂಡು, ರಜೆ ಮುಗಿದ ನಂತರ ದಿನಾಂಕ: 23.10.2003 ರಿಂದ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತಾರೆ. ಆ ಪ್ರಯುಕ್ತ ಸದರಿಯವರಿಗೆ ಕಾರಣ ಕೇಳುವ ನೋಟೀಸ್ ಜಾರಿಗೊಳಿಸಿದಾಗ, ಕೌಟುಂಬಿಕ ಕಾರಣದ ಹಿನ್ನೆಲೆಯಲ್ಲಿ ದಿನಾಂಕ:3.10.2003 ರಿಂದಲೇ ರಾಜೀನಾಮೆಯನ್ನು ಅಂಗೀಕರಿಸುವಂತೆ ಸದರಿ ವೈದ್ಯರು ಕೋರಿರುತ್ತಾರೆ. ಇದರಿಂದಾಗಿ ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಇರುವಾಗಲೇ ಅನಧಿಕೃತ ಗೈರುಹಾಜರಾಗಿರುವುದರಿಂದ ಖಾಯಂಪೂರ್ವ ಸೇವಾ ನಿಯಮಗಳಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸರ್ಕಾರವು ಆಯುಕ್ತರು, ಆಕುಕ ಸೇವೆಗಳು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಆಕುಕ 206 ಹೆಚ್ಎಸ್ಹೆಚ್ 2005, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ವಿಜಯ ಆರ್. ನಾಯ್ಕು, ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಘಟಕ, ಅಂಕೋಲಾ, ಉತ್ತರ ಕನ್ನಡ ಜಿಲ್ಲೆ ಇವರು ದಿನಾಂಕ: 23.10.2003 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ:23.10.2003 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1634

**ಟಿ.ಎನ್. ನಾರಾಯಣಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಸಮಾಜ ಕಲ್ಯಾಣ ಸಚಿವಾಲಯದ ವ್ಯಾಪ್ತಿಯಲ್ಲಿ ಹಿಂದುಳಿದ ವರ್ಗಗಳ ಇಲಾಖೆ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಹಾಗೂ ಅಲ್ಪಸಂಖ್ಯಾತರ ಇಲಾಖೆಯ ವ್ಯಾಪ್ತಿಯಲ್ಲಿ ನಡೆಸುತ್ತಿರುವ ಸರ್ಕಾರದ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳಲ್ಲಿಯ ವಿದ್ಯಾರ್ಥಿಗಳ ಭೋಜನಾ ವೆಚ್ಚವನ್ನು ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ 306ಪಕವಿ 1999 ದಿನಾಂಕ: 5.8.2000
2. ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಇವರ ಪತ್ರ ಸಂಖ್ಯೆ ಹಿಂವನಿ/ವನಿಶಾ.2/ಸಿಆರ್.164/2004-05 ದಿನಾಂಕ: 7.4.2005 ಮತ್ತು 2.9.2005
3. ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ /ಪಕನಿ/ಇಡಿ. 2/ ಸಿಆರ್ / 12/2005-06 ದಿನಾಂಕ:25.5.2005
4. ನಿರ್ದೇಶಕರು ಅಲ್ಪಸಂಖ್ಯಾತರ ಇಲಾಖೆ ಇವರ ಪತ್ರ ಸಂಖ್ಯೆ ಅಸಂನಿ/ಸಿಬ್ಬಂದಿ/ಸಿಆರ್.19/2005-06 ದಿನಾಂಕ:12.5.2005.
5. ದಿನಾಂಕ:7.10.2005 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1) ರ ಆದೇಶದಲ್ಲಿ ಸಮಾಜ ಕಲ್ಯಾಣ ಸಚಿವಾಲಯದ ವ್ಯಾಪ್ತಿಯಲ್ಲಿ ಬರುವ ಸಮಾಜ ಕಲ್ಯಾಣ ಇಲಾಖೆ, ಪರಿಶಿಷ್ಟ ಕಲ್ಯಾಣ ಇಲಾಖೆ ಹಾಗೂ ಹಿಂದುಳಿದ ವರ್ಗಗಳ ಇಲಾಖೆಯ ಕಾರ್ಯವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ವಿದ್ಯಾರ್ಥಿಗಳ ಭೋಜನಾ ವೆಚ್ಚವನ್ನು ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ಈ ಕೆಳಕಂಡಂತೆ ಹೆಚ್ಚಿಸಲಾಗಿದೆ.

1. ಸರ್ಕಾರಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳ ಮಾಹೆಯಾನ ಭೋಜನಾ ವೆಚ್ಚ ರೂ.350/-ರಿಂದ 400/-
2. ಸರ್ಕಾರಿ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳ ಮಾಹೆಯಾನ ಭೋಜನಾ ವೆಚ್ಚ ರೂ.400/-ರಿಂದ 450/-

2005-06ನೇ ಸಾಲಿನ ಆಯವ್ಯಯ ಭಾಷಣದಲ್ಲಿ ರಾಜ್ಯದಲ್ಲಿರುವ ಎಲ್ಲಾ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ವಸತಿ ನಿಲಯಗಳಲ್ಲಿರುವ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳಲ್ಲಿರುವ ವಿದ್ಯಾರ್ಥಿಗಳ ಭೋಜನಾ ವೆಚ್ಚವನ್ನು ಕ್ರಮವಾಗಿ ಮಾಹೆಯಾನ ರೂ.400/-ರಿಂದ ರೂ.450/- ಹಾಗೂ ರೂ.450/-ರಿಂದ ರೂ500/-ಕ್ಕೆ ಹೆಚ್ಚಿಸಲಾಗುವುದೆಂದು ಘೋಷಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3) ರಿಂದ (5) ರಲ್ಲಿ ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ, ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ನಿರ್ದೇಶಕರು ಅಲ್ಪಸಂಖ್ಯಾತರ ಇಲಾಖೆ ಇವರುಗಳು ಆಹಾರ ಸಾಮಗ್ರಿಗಳ ದರಗಳು ಹೆಚ್ಚಳವಾಗಿರುವುದರಿಂದ ಸರ್ಕಾರಿ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯಗಳಲ್ಲಿ ವಿದ್ಯಾರ್ಥಿಗಳ ಭೋಜನಾ ವೆಚ್ಚವನ್ನು ಕ್ರಮವಾಗಿ ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ರೂ.400/-ರಿಂದ ರೂ.450/- ಹಾಗೂ ರೂ.450/-ರಿಂದ ರೂ.500/-ಕ್ಕೆ ಹೆಚ್ಚಿಸುವಂತೆ ಕೋರಿರುತ್ತಾರೆ.

ದಿನಾಂಕ:7.10.2005ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ಈ ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಿ ಈ ಪ್ರಸ್ತಾವನೆಗೆ ಅನುಮೋದನೆ ನೀಡಿದ್ದು ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 175 ಬಿಎಂಎಸ್ 2005, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2005**

ಮೇಲಿನ ವಿಷಯವನ್ನು ಕೂಲಂಕುಶವಾಗಿ ಪರಿಶೀಲಿಸಿದ ನಂತರ ಸಮಾಜ ಕಲ್ಯಾಣ ಸಚಿವಾಲಯದ ವ್ಯಾಪ್ತಿಗೆ ಬರುವ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಹಿಂದುಳಿದ ವರ್ಗಗಳ ಇಲಾಖೆಯ ಹಾಗೂ ಅಲ್ಪಸಂಖ್ಯಾತರ ಇಲಾಖೆಗಳ ಸರ್ಕಾರಿ ಮೆಟ್ರಿಕ್ ಪೂರ್ವ ಹಾಗೂ ಸರ್ಕಾರಿ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ವಿದ್ಯಾರ್ಥಿಗಳ ಭೋಜನಾ ವೆಚ್ಚವನ್ನು ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಹೆಚ್ಚಿಸಿ ಆದೇಶಿಸಲಾಗಿದೆ.

1. ಸರ್ಕಾರಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳ ಮಾಹೆಯಾನ ಭೋಜನಾ ವೆಚ್ಚ ರೂ. 400/-ರಿಂದ 450/-
2. ಸರ್ಕಾರಿ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯದ ವಿದ್ಯಾರ್ಥಿಗಳ ಮಾಹೆಯಾನ ಭೋಜನಾ ವೆಚ್ಚ ರೂ. 450/-ರಿಂದ 500/-

ಈ ಆದೇಶವನ್ನು ಅಧಿಕಾರಿಯುಕ್ತ ಸಮಿತಿಯು ತನ್ನ ನಡವಳಿ ದಿನಾಂಕ: 07.10.2005ರಂದು ನೀಡಿದ ಅನುಮೋದನೆ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಪ್ರಾಣದೇವ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1602

## ವಸತಿ ಸಚಿವಾಲಯ

**ವಿಷಯ:** ದಿನಾಂಕ 12.11.2005 ಮತ್ತು 13.11.2005ರ 2ದಿವಸಗಳಂದು ಶ್ರೀಲಂಕಾದ ಕೊಲಂಬೊದಲ್ಲಿ ನಡೆಯಲಿರುವ 19ನೇ ಮಾಸ್ಟರ್ ಅಥ್ಲೆಟಿಕ್ ಚಾಂಪಿಯನ್ ಶಿಪ್‌ನಲ್ಲಿ ಭಾಗವಹಿಸಲು ಶ್ರೀ ಕೆ.ಹೆಚ್. ನಂಜಪ್ಪ, ಕಿ.ಕೆ.ನಿ. ಕ.ಕೊ.ನಿ.ಮ. ಇವರಿಗೆ ಅನುಮತಿ ಮತ್ತು ಕ್ರೀಡಾ ಕೂಟಕ್ಕೆ ಹೋಗಿ ಬರಲು ತಗಲುವ ವೆಚ್ಚವನ್ನು ಭರಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು,ಕ.ಕೊ.ನಿ.ಮ ಇವರ ಪತ್ರ ಸಂಖ್ಯೆ: ಕ.ಕೊ.ನಿ.ಮ:ಆಡಳಿತ:8/358/2005-06/910, ದಿ:19-10-2005.
2. ಗೌರವ ಕಾರ್ಯದರ್ಶಿ, ಕರ್ನಾಟಕ ಮಾಸ್ಟರ್ಸ್ ಅಥ್ಲೆಟಿಕ್ ಅಸೋಸಿಯೇಶನ್, ಬೆಂಗಳೂರು ಇವರ ಪತ್ರ ಸಂಖ್ಯೆ ಕೆಎಂಎಎ/05-06, ದಿನಾಂಕ 16.10.2005

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಪತ್ರದಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿರವರು ಕ್ರಮಸಂಖ್ಯೆ 2ನ್ನು ಉಲ್ಲೇಖಿಸಿದ್ದು, ಗೌರವ ಕಾರ್ಯದರ್ಶಿ, ಕರ್ನಾಟಕ ಮಾಸ್ಟರ್ಸ್ ಅಥ್ಲೆಟಿಕ್ ಅಸೋಸಿಯೇಶನ್, ಬೆಂಗಳೂರುರವರು ದಿನಾಂಕ 12-11-05 ಮತ್ತು 13-11-05 ರ ಎರಡು ದಿವಸಗಳಂದು ಶ್ರೀಲಂಕಾದ ಕೊಲಂಬೊದಲ್ಲಿ ಭಾಗವಹಿಸಲು ಕ್ರೀಡಾಕೂಟವನ್ನು ಏರ್ಪಡಿಸಿದ್ದು ಸದರಿ ಕ್ರೀಡಾಕೂಟಕ್ಕೆ ಕರ್ನಾಟಕ ಕೊಳಚೆ ನಿರ್ಮೂಲನ

ಮಂಡಳಿಯ ನೌಕರರಾದ ಶ್ರೀ ಕೆ.ಹೆಚ್. ನಂಜಪ್ಪ, ಕಿರಿಯ ಕೆಲಸ ನಿರೀಕ್ಷಕರು ಇವರನ್ನು ಈ ಅಸೋಷಿಯೇಶನ್ ರವರು ಆಯ್ಕೆ ಮಾಡಿರುವುದಾಗಿ ತಿಳಿಸಿರುವುದರಿಂದ ಶ್ರೀ ಕೆ.ಹೆಚ್. ನಂಜಪ್ಪ, ಕಿರಿಯ ಕೆಲಸ ನಿರೀಕ್ಷಕರು ಇವರನ್ನು 2 ದಿವಸಗಳ ಅವಧಿಯಲ್ಲಿ ಶ್ರೀಲಂಕಾ ಕೊಲಂಬೊದಲ್ಲಿ ನಡೆಯಲಿರುವ 19 ನೇ ಮಾಸ್ಟರ್ಸ್ ಅಥ್ಲೆಟಿಕ್ ಚಾಂಪಿಯನ್ ಶಿಪ್‌ನ ಕ್ರೀಡಾ ಕೂಟದಲ್ಲಿ ಭಾಗವಹಿಸಲು ಅನುಮತಿ ಹಾಗೂ ಈ ಕ್ರೀಡಾಕೂಟಕ್ಕೆ ತಗಲುವ ವೆಚ್ಚ ರೂ.13,000/-ಗಳನ್ನು ಪಾವತಿಸಲು ಅನುಮತಿ ಕೋರಿರುತ್ತಾರೆ. ಈ ಸ್ಪರ್ಧೆಗೆ ಭಾಗವಹಿಸಲು ಅಗತ್ಯವಿರುವ ರೂ.13,000/- ಹಣವನ್ನು ಮಂಡಳಿಯ ಹುಡ್ಕೋ ಸಂಸ್ಥೆಯ ಸಂಶೋಧನೆ ಮತ್ತು ಅಭಿವೃದ್ಧಿ ಶೀರ್ಷಿಕೆಯಡಿಯಲ್ಲಿ (ಆರ್ ಮತ್ತು ಡಿ) ಭರಿಸುವುದಾಗಿ ತಿಳಿಸಿರುತ್ತಾರೆ.

ಸರ್ಕಾರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 116 ಕೊಮಂಇ 2005, ಬೆಂಗಳೂರು, ದಿನಾಂಕ: 5ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ದಿನಾಂಕ 12.11.2005 ಮತ್ತು 13.11.2005 ರಂದು ಶ್ರೀಲಂಕಾ ಕೊಲಂಬೊದಲ್ಲಿ ನಡೆಯಲಿರುವ 19ನೇ ಮಾಸ್ಟರ್ಸ್ ಅಥ್ಲೆಟಿಕ್ ಚಾಂಪಿಯನ್ ಶಿಪ್‌ನ ಕ್ರೀಡಾಕೂಟದಲ್ಲಿ ಶ್ರೀ ಕೆ.ಹೆಚ್. ನಂಜಪ್ಪ, ಕಿರಿಯ ಕೆಲಸ ನಿರೀಕ್ಷಕರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಬೆಂಗಳೂರು ಇವರಿಗೆ ಭಾಗವಹಿಸಲು ಸರ್ಕಾರ ಅನುಮತಿ ನೀಡಿದೆ.

ಈ ಕ್ರೀಡಾಕೂಟದಲ್ಲಿ ಭಾಗವಹಿಸುವ ಪ್ರತಿನಿಧಿಗೆ ತಗಲುವ ವೆಚ್ಚ ರೂ. 13,000/- ಹುಡ್ಕೋ ಸಂಸ್ಥೆಯ ಸಂಶೋಧನೆ ಮತ್ತು ಅಭಿವೃದ್ಧಿ ಶೀರ್ಷಿಕೆಯಡಿಯಲ್ಲಿ (ಆರ್ ಮತ್ತು ಡಿ) ನಿಧಿಯಲ್ಲಿ ಭರಿಸುವುದು.

ಈ ಪ್ರಸ್ತಾವನೆಯನ್ನು ಮಾನ್ಯ ವಸತಿ ಸಚಿವರು ನೀಡಿರುವ ಅನುಮೋದನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1603 **ಹೆಚ್. ಹನುಮಂತಯ್ಯ**

ಪೀಠಾಧಿಕಾರಿ -1, ವಸತಿ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ

**ಓದಲಾಗಿದೆ:** 1. ಮು.ಇಂ.ಸಂಕದ:ರಶಾ:ಮೇಲ್ದರ್ಜೆ:ಚಿಮ:ಸ್ಇಂ7:2005-06, ದಿನಾಂಕ:15-11-2005, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಚಿಕ್ಕಮಗಳೂರು ಜಿಲ್ಲೆ, ಶೃಂಗೇರಿ ತಾಲ್ಲೂಕಿನ ಶೃಂಗೇರಿ-ವಿದ್ಯಾರಣ್ಯಪುರ ಅಗ್ರಹಾರ ಗ್ರಾಮೀಣ ರಸ್ತೆಯನ್ನು ಮೇಲ್ದರ್ಜೆಗೇರಿಸಲು ಇಲ್ಲಿನ ವಾಹನ ಸಾಂದ್ರತೆ ಹೆಚ್ಚಾಗಿರುವುದರಿಂದ ಸದರಿ 1.00 ಕಿಮೀ ರಸ್ತೆಯನ್ನು ಗ್ರಾಮೀಣ ರಸ್ತೆಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 230 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಚಿಕ್ಕಮಗಳೂರು ಜಿಲ್ಲೆ, ಶೃಂಗೇರಿ ತಾಲ್ಲೂಕಿನ ಶೃಂಗೇರಿ-ವಿದ್ಯಾರಣ್ಯಪುರ ಅಗ್ರಹಾರದ 1.00 ಕಿಮೀ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 1617 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಆರ್.ಎ. ಕುಲಕರ್ಣಿ, ಅಧೀನ ಕಾರ್ಯದರ್ಶಿ ಒಳಾಡಳಿತ ಮತ್ತು ಸಾರಿಗೆ ಇಲಾಖೆ ಇವರಿಗೆ ವೇತನ ರಹಿತ ರಜೆ ಮಂಜೂರಾತಿ ಬಗ್ಗೆ.

**ಓದಲಾಗಿದೆ:**

1. ಸಿಆಸುಇ 125 ಸಅರ 2005, ದಿನಾಂಕ:18.6.2005 ಮತ್ತು 20.7.2005ರ ಅಧಿಸೂಚನೆ.
2. ಶ್ರೀ ಆರ್.ಎ. ಕುಲಕರ್ಣಿ, ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ ಇವರ ಮನವಿ ದಿನಾಂಕ: 28.8.2005.
3. ಅನಧಿಕೃತ ಟಿಪ್ಪಣಿ ಸಂಖ್ಯೆ: ಹೆಚ್‌ಡಿ 855 ಎಸ್‌ಎಸ್‌ಟಿ 2005 ದಿನಾಂಕ:4.10.2005.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1) ರಲ್ಲಿನ ಅಧಿಸೂಚನೆ ದಿನಾಂಕ: 18.6.2005 ಮತ್ತು 20.7.2005ರಲ್ಲಿ ಶ್ರೀ ಆರ್.ಎ. ಕುಲಕರ್ಣಿ, ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ ಇವರಿಗೆ ದಿನಾಂಕ:29.6.2005 ರಿಂದ 12.8.2005 ರವರೆಗೆ 45 ದಿನಗಳು ಗಳಿಕೆ ರಜೆಯನ್ನು ಮಂಜೂರು ಮಾಡಿ, ಈ ರಜೆಯ ಅವಧಿಯಲ್ಲಿ ರಜೆಯನ್ನು ಮುಂದುವರೆಸಬಾರದೆಂಬ ಷರತ್ತಿಗೆ ಒಳಪಟ್ಟು ವಿದೇಶದಲ್ಲಿರುವ ಅವರ ಮಗನನ್ನು ನೋಡಲು ಯು.ಎಸ್. ಎ.ಗೆ ಹೋಗಿ ಬರಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ ಉಲ್ಲೇಖ (2)ರ ದಿನಾಂಕ:28.8.2005ರ ಮನವಿಯಲ್ಲಿ ಶ್ರೀ ಆರ್.ಎ. ಕುಲಕರ್ಣಿ, ಅಧೀನ ಕಾರ್ಯದರ್ಶಿ ಇವರು ಅನಿವಾರ್ಯ ಕಾರಣಗಳಿಂದ ರಜೆಯನ್ನು ಮುಂದುವರೆಸಬೇಕಾಗಿರುವುದರಿಂದ ದಿನಾಂಕ:31.10.2005 ರವರೆಗೆ ರಜೆಯನ್ನು ಮಂಜೂರು ಮಾಡುವಂತೆ ಯು.ಎಸ್.ಎ.ಯಿಂದ ಪತ್ರವನ್ನು ನೇರವಾಗಿ ಸಿ.ಆ.ಸು.ಇಲಾಖೆಗೆ ಸಲ್ಲಿಸಿರುವರು. ಇವರು ಕೋರಿರುವ ರಜೆಯನ್ನು ಮಂಜೂರು ಮಾಡಲು ಸೂಕ್ತ ಮೇಲಾಧಿಕಾರಿಗಳ ಶಿಫಾರಸ್ಸು ಇಲ್ಲವಾದುದರಿಂದ ಕೋರಿರುವ ರಜೆಯನ್ನು ಮಂಜೂರು ಮಾಡಲು ಜಂಟಿ ಕಾರ್ಯದರ್ಶಿ ಒಳಾಡಳಿತ ಇಲಾಖೆ ಇವರ ಅಭಿಪ್ರಾಯವನ್ನು ಕೋರಲಾಗಿತ್ತು.

ಮೇಲೆ ಓದಲಾದ ಅನಧಿಕೃತ ಟಿಪ್ಪಣಿ ದಿನಾಂಕ:4.10.2005 ರಲ್ಲಿ ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ ಇವರು ಶ್ರೀಯುತರಿಗೆ ಅಧಿಸೂಚನೆ ದಿನಾಂಕ :18.6.2005 ಮತ್ತು 20.7.2005ರಲ್ಲಿ ರಜೆ ಶಿಫಾರಸ್ಸಿನ ಅನುಸಾರ ದಿನಾಂಕ:29.6.2005 ರಿಂದ 12.8.2005 ರವರೆಗೆ 45 ದಿನಗಳು ಸಂಯುಕ್ತ ರಜೆಯನ್ನು ಮಂಜೂರು ಮಾಡಿ ನಿಯಮಾನುಸಾರ ವಿದೇಶಕ್ಕೆ ತೆರಳಿದ ನಂತರ ರಜೆಯನ್ನು ಮುಂದುವರೆಸಬಾರದೆಂಬ ಷರತ್ತಿಗೊಳಪಟ್ಟಂತೆ ಕ್ರಮ ಕೈಗೊಳ್ಳುವಂತೆ ತಿಳಿಸಲಾಗಿದ್ದು, ಇವರ ಮುಂದುವರೆಸಿದ ರಜೆ ಮಂಜೂರಾತಿ ಬಗ್ಗೆ ರಜೆಯನ್ನು ಮಂಜೂರು ಮಾಡಲು ಸೂಕ್ತ ಶಿಫಾರಸ್ಸನ್ನು ಮಾಡಿರುವುದಿಲ್ಲ.

ಶ್ರೀ ಆರ್.ಎ. ಕುಲಕರ್ಣಿ, ಅಧೀನ ಕಾರ್ಯದರ್ಶಿ ಇವರು ದಿನಾಂಕ:20.10.2005ರ ಟಿಪ್ಪಣಿಯಲ್ಲಿ ವಿದೇಶ ಪ್ರವಾಸಕ್ಕಾಗಿ ರಜೆಯನ್ನು ಉಪಯೋಗಿಸಿಕೊಂಡು ದಿನಾಂಕ:20.10.2005 ರಂದು ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿರುವುದಾಗಿ ತಿಳಿಸಿರುವರು.

ಶ್ರೀ ಆರ್.ಎ. ಕುಲಕರ್ಣಿ, ಅಧೀನ ಕಾರ್ಯದರ್ಶಿ ಇವರಿಗೆ ದಿನಾಂಕ: 29.6.2005 ರಿಂದ 12.8.2005 ರವರೆಗೆ ಒಟ್ಟು 45 ದಿನಗಳು ಸಂಯುಕ್ತ ರಜೆಯನ್ನು ಮಂಜೂರು ಮಾಡಿ ರಜೆಯನ್ನು ಮುಂದುವರೆಸಬಾರದೆಂಬ ಷರತ್ತಿಗೆ ಒಳಪಟ್ಟು ಯು.ಎಸ್.ಎ.ಗೆ ಹೋಗಿ ಬರಲು ಅನುಮತಿ ನೀಡಲಾಗಿದ್ದರೂ ಸಹ ಮತ್ತೆ ರಜೆಯನ್ನು ಮುಂದುವರೆಸಿ ದಿನಾಂಕ: 13.8.2005 ರಿಂದ 19.10.2005 ರವರೆಗೆ ಕಛೇರಿಗೆ ಅನಧಿಕೃತ ಗೈರು ಹಾಜರಾಗಿರುವ ಮೇರೆಗೆ ಹಾಗೂ ಇವರಿಗೆ ದಿನಾಂಕ:13.8.2005 ರಿಂದ 19.10.2005 ರವರೆಗೆ 68 ದಿವಸಗಳಿಗೆ ರಜೆಯನ್ನು ಮಂಜೂರು ಮಾಡಲು ಇವರ ಮೇಲಾಧಿಕಾರಿಗಳು ಶಿಫಾರಸ್ಸು ಮಾಡಿರುವುದಿಲ್ಲವಾದ ಕಾರಣದಿಂದ ಶ್ರೀಯುತರಿಗೆ ಸದರಿ ಅವಧಿಗೆ 68 ದಿನಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106- ಎ ಅನುಸಾರ ವೇತನ ರಹಿತ ರಜೆ ಎಂದು ಪರಿಗಣಿಸುವ ಬಗ್ಗೆ ಪರೀಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 125 ಸಅರ 2005, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2005**

ಶ್ರೀ ಆರ್.ಎ. ಕುಲಕರ್ಣಿ, ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ ಇವರಿಗೆ ದಿನಾಂಕ: 29.6.2005 ರಿಂದ 12.8.2005 ರವರೆಗೆ 45 ದಿನಗಳು ಸಂಯುಕ್ತ ರಜೆಯನ್ನು ಮಂಜೂರು ಮಾಡಿ, ನಿಯಮಾವಳಿಯನುಸಾರ ರಜೆಯನ್ನು ಮುಂದುವರೆಸಬಾರದೆಂಬ ಷರತ್ತಿಗೆ ಒಳಪಟ್ಟು ಯು.ಎಸ್.ಎ.ಗೆ ಹೋಗಿ ಬರಲು ಅನುಮತಿ ನೀಡಲಾಗಿದ್ದರೂ ಈ ಷರತ್ತನ್ನು ಉಲ್ಲಂಘಿಸಿ ರಜೆಯನ್ನು ಮುಂದುವರೆಸಿರುವ ಮೇರೆಗೆ ಹಾಗೂ ಇವರ ರಜೆ ಮಂಜೂರಾತಿ ಬಗ್ಗೆ ಇವರ ಮೇಲಾಧಿಕಾರಿಗಳು ಸೂಕ್ತ ಶಿಫಾರಸ್ಸನ್ನು ಮಾಡಿರುವುದಿಲ್ಲವಾದ ಮೇರೆಗೆ ಶ್ರೀಯುತರಿಗೆ ದಿನಾಂಕ:13.8.2005 ರಿಂದ 19.10.2005 ರವರೆಗೆ 68 ದಿವಸಗಳಿಗೆ (ಅರವತ್ತೆಂಟು ದಿನಗಳು) ಕರ್ನಾಟಕ ನಾಗರೀಕ ಸೇವಾನಿಯಮಾವಳಿ ನಿಯಮ 106-ಎ ರಡಿಯಲ್ಲಿ ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ, ಹಾಗೂ ಸದರಿ ನಿಯಮದ ಅನುಸಾರ ಈ 68 ದಿವಸಗಳ ಅವಧಿಯನ್ನು ಅಸಾಧಾರಣ ರಜೆಗೆ ಖರ್ಚು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1607

## REVENUE SECRETARIAT

**Sub:** Payment of compensation to farmers whose standing crops are destroyed in the rain affected areas.

**Read:**
1. G.O.No. RD 518 TNR 05 dated 24.08.2005.
2. RD 567 TNR 05 dated 24.09.2005.

**Preamble:-**

In G.O. dated 24.8.2005 for the flood affected lands the State Government allowed as a special one time measure to pay crop compensation at double the rates prescribed under CRF norms, the difference being met out of the state Budget. Subsequently vide letter (2) above it was clarified that for insured crops no Payment will be paid. However, farmers of rain damaged areas and farmers of insured area are demanding double the rate as paid to the farmers in the flood affected areas. These issues were discussed in the Empowered Committee meeting dated 17.10.2005 and in the review meeting chaired by the Hon'ble Chief Minister on 7.11.2005. It was unanimously decided that payment for crop loss in the rain affected areas and also for insured crops should be made on par with the special rates given to the flood affected areas, Hence the following order

**G.O. Order No. RD 567 TNR 2005, Bangalore, Dated: 8th November 2005**

In the circumstances explained in the preamble, Government are pleased to order for payment of compensation to farmers in the rain affected areas including farmers who have insured their crops whose standing crops are destroyed in the heavy rains at the following rates for the different crops.

| | Agriculture input subsidy where crop loss was 50%and above | |
|---|---|---|
| 1. | For agriculture crops, horticulture crops and annual plantation crops | Rainfed areas Rs.2000/- per hectare, Rs.5000/- per hectare, in area with assured irrigation and Rs.8000 per hectare of perennial crops. |
| 2 | Input subsidy to farmers, other than small and marginal farmers, In case of severe calamity, subsidy will be payable at appropriate rate per hectare upto 2 hectares only, irrespective of the size of holdings. | 1. Rainfed areas:@ Rs.2000/- per hectare<br>2. Irrigated areas:@ Rs.5000/- per hectare<br>3. Perennial crops @ Rs. 8000/- per hectare. |
| 3 | These rates also apply to **INSURED CROPS** in **FLOOD AND RAIN** affected areas equally. | |

This is a special sanction as a single time measure to provide crop compensation to the rain affected farmers. This shall not create a precedent.

By Order and in the name of the Governor of Karnataka,
**M.S. DESAI**
Under Secretary to Government, (Relief & Services)
Revenue Department.

P.R. 1600

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಬಸವರಾಜ ಕುಕ್ಕುಂದ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ :ಸಿಆಸುಇ 21 ಎಸ್‌ಇಎನ್ 02 ದಿನಾಂಕ:20.02.2002.
2. ಶ್ರೀ ಬಸವರಾಜ ಕುಕ್ಕುಂದ ಅವರ ದಿನಾಂಕ :25.03.2002 ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಬಸವರಾಜ ಕುಕ್ಕುಂದ, ನಿವೃತ್ತ ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಇವರು 1998 - 2000 ದ ಸಾಲಿನಲ್ಲಿ ಗುಲ್ಬರ್ಗಾ ಜಿಲ್ಲಾ ಯಾದಗಿರಿ ವಿಭಾಗದ ಕಾರ್ಯಪಾಲಕ ಇಂಜಿನಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ತುಮುಕೂರು ಬೆಂಡೆ ಬೆಂಬ್ಲ ಸಂಗಮ ರಸ್ತೆ 21,22,23 ಮತ್ತು 24ನೇ ಕಿ.ಮೀಗಳ ಮಧ್ಯೆ ನಬಾರ್ಡ್ ಯೋಜನೆಯಡಿ ಮಾಡಿರುವ ಡಾಂಬರೀಕರಣ ಕಾಮಗಾರಿಯಲ್ಲಿ ಕಳಪೆ ಗುಣಮಟ್ಟದ ಕಾಮಗಾರಿ ಹಾಗೂ ಕಾಮಗಾರಿ ಮಾಡಿರುವುದಕ್ಕಿಂತ ಹೆಚ್ಚಿಗೆ ಕಾಮಗಾರಿ ಮಾಡಿರುವುದರ ಬಗ್ಗೆ ದೃಢೀಕರಿಸಿ ಆ ಮೂಲಕ ಸರ್ಕಾರಕ್ಕೆ ರೂ.3,16,700/-ಗಳಷ್ಟು ಆರ್ಥಿಕ ನಷ್ಟವುಂಟು ಮಾಡಿದ ಆರೋಪಗಳಿಗಾಗಿ ಶ್ರೀ ಬಸವರಾಜ ಕುಕ್ಕುಂದ, ನಿವೃತ್ತ ಮುಖ್ಯ ಇಂಜಿನಿಯರ್ ಇವರಿಗೆ ಮೇಲೆ(1) ರಲ್ಲಿ ಓದಲಾದ ದಿನಾಂಕ:20.02.2002 ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ(2) ರಲ್ಲಿ ಓದಲಾದ ದಿನಾಂಕ: 25.03.2002 ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿಯವರು ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

### ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 21 ಎಸ್‌ಇಎನ್ 02, ಬೆಂಗಳೂರು, ದಿನಾಂಕ: 15ನೇ ನವೆಂಬರ್ 2005

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪಂಕಜ ಪಾಂಡೆ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಗುಲ್ಬರ್ಗಾ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಲೋಕೋಪಯೋಗಿ ಇಲಾಖೆ ಯಾದಗಿರಿ ವಿಭಾಗದ ಕಾರ್ಯಪಾಲಕ ಅಭಿಯಂತರರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಯನ್ನು ಗುಲ್ಬರ್ಗಾ ಜಿಲ್ಲಾ ಪಂಚಾಯತ್ ಕಛೇರಿಯಲ್ಲಿ ನಡೆಸುವುದು ಹಾಗೂ ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 1608

### ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 63 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2005

**ವಿಷಯ:** ಶ್ರೀ ಹೆಚ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಮತ್ತು ಶ್ರೀ ಸೈಯದ್ ಮೀರ್, ನಿವೃತ್ತ ಜಂಟಿ ಕೃಷಿ ನಿರ್ದೇಶಕರು ರವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

2003-04ನೇ ಸಾಲಿನಲ್ಲಿ ನೀರಾವರಿ ಯೋಜನಾ ವಲಯ ಗುಲ್ಬರ್ಗಾ ಕಾಡಾದಲ್ಲಿ ಶ್ರೀ ಹೆಚ್. ಚಂದ್ರಶೇಖರಯ್ಯ, ನಿವೃತ್ತ ಪ್ರಧಾನ ಇಂಜಿನಿಯರ್ ರವರು ಆಡಳಿತಾಧಿಕಾರಿಯಾಗಿ ಹಾಗೂ ಶ್ರೀ ಸೈಯದ್ ಮೀರ್, ನಿವೃತ್ತ ಜಂಟಿ ಕೃಷಿ ನಿರ್ದೇಶಕರು, ಭೂ ಅಭಿವೃದ್ಧಿ ಅಧಿಕಾರಿ (ಕೃಷಿ) ಆಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 2003-04ನೇ ಸಾಲಿನ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಟೆಂಡರ್ ಕರೆಯುವಾಗ ಹೆಚ್ಚಿನ ದರ ಸೂಚಿಸಿದವರಿಗೆ ನೀಡಲಾಗಿದ್ದು ಇದರಿಂದ ಸರ್ಕಾರಕ್ಕೆ ರೂ.29,736/ -ನ್ನು ನಷ್ಟವುಂಟು ಮಾಡಿ ಆ ಮೂಲಕ ತೀವ್ರ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಹೆಚ್.ಚಂದ್ರಶೇಖರಯ್ಯ, ನಿವೃತ್ತ ಪ್ರಧಾನ ಇಂಜಿನಿಯರ್ ರವರು ಆಡಳಿತಾಧಿಕಾರಿಯಾಗಿ ಹಾಗೂ ಶ್ರೀ ಸೈಯದ್ ಮೀರ್, ನಿವೃತ್ತ ಜಂಟಿ ಕೃಷಿ ನಿರ್ದೇಶಕರು ಅವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಹೆಚ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಮತ್ತು ಶ್ರೀ ಸೈಯದ್ ಮೀರ್, ನಿವೃತ್ತ ಜಂಟಿ ಕೃಷಿ ನಿರ್ದೇಶಕರು, ಅವರುಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11 - ಎ ರಲ್ಲಿ ನಿಗಧಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸತಕ್ಕದ್ದು. -

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 1609

**ಸುತ್ತೋಲೆ ಸಂಖ್ಯೆ: ಸಿಆಸುಇ 19 ಸೇಸವಿ 2005, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2005**

**ವಿಷಯ:** ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ಸದಸ್ಯತ್ವ ಶುಲ್ಕವನ್ನು ಪಾವತಿ ಮಾಡುವ ಬಗ್ಗೆ .

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಸವಿ 93, ದಿನಾಂಕ 24.12.1993.
2. ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರ ಪತ್ರ ಸಂಖ್ಯೆ: ಜಿಇಎ:2001:2005-06 ದಿನಾಂಕ 19.10.2005.
3. ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರ ಪತ್ರ ಸಂಖ್ಯೆ: ಜಿಇಎ:2022:2005-06 ದಿನಾಂಕ 22.10.2005.

ದಿನಾಂಕ 24.12.93ರ ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ವಾರ್ಷಿಕ ಸದಸ್ಯತ್ವ ಶುಲ್ಕವಾದ ರೂ. 6-00 (ಆರು ರೂಪಾಯಿಗಳು ಮಾತ್ರ)ಗಳನ್ನು ನೀಡಬಯಸುವ ರಾಜ್ಯ ಸರ್ಕಾರಿ ನೌಕರರಿಂದ ಪ್ರತಿ ವರ್ಷ ಅಕ್ಟೋಬರ್ ಅಥವಾ ನವೆಂಬರ್ ತಿಂಗಳುಗಳ ಸಂಬಳದಿಂದ, ಸದರಿ ಆದೇಶದಲ್ಲಿರುವ ಷರತ್ತುಗಳಿಗನುಸಾರವಾಗಿ ಕಡಿತಗೊಳಿಸಿ ಚೆಕ್ ಅಥವಾ ಡಿ.ಡಿ. ಮೂಲಕ ಸಂಘಕ್ಕೆ ಸಂದಾಯಗೊಳಿಸಲು ಸೂಚನೆ ನೀಡಲಾಗಿತ್ತು.

2) ದಿನಾಂಕ 19 -10-2005 ಮತ್ತು 22-10-05 ರ ಉಲ್ಲೇಖಿತ ಪತ್ರಗಳಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರು ತಿದ್ದುಪಡಿ ಮಾಡಿದ ಬೈಲಾ ನಿಯಮಗಳ ಪ್ರಕಾರ ರೂ. 20-00 (ಇಪ್ಪತ್ತು ರೂಪಾಯಿಗಳು ಮಾತ್ರ)ನ್ನು ನೌಕರರ ವೇತನದಲ್ಲಿ ಸಂಘದ ಸದಸ್ಯತ್ವ ಶುಲ್ಕವೆಂದು ಕಟಾವುಗೊಳಿಸಲು ಮತ್ತು ಅದರ ಲೆಕ್ಕ ಪತ್ರಗಳ ನಿರ್ವಹಣೆಯ ಅನುಕೂಲಕ್ಕಾಗಿ ಪ್ರತಿ ವರ್ಷ ನೌಕರರ ಜನವರಿ ಅಥವಾ ಫೆಬ್ರುವರಿ ಮಾಹೆಯ ವೇತನದಲ್ಲಿ ಅದನ್ನು ಕಟಾವುಗೊಳಿಸಲು ಸರ್ಕಾರವನ್ನು ಕೋರಿರುತ್ತಾರೆ.

3) ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ವಾರ್ಷಿಕ ಸದಸ್ಯತ್ವ ಶುಲ್ಕವಾದ ರೂ.20-00 (ಇಪ್ಪತ್ತು ರೂಪಾಯಿಗಳು ಮಾತ್ರ) ಗಳನ್ನು ನೀಡಬಯಸುವ ರಾಜ್ಯ ಸರ್ಕಾರಿ ನೌಕರರಿಂದ 2005-06ನೇ ಸಾಲಿಗೆ ಫೆಬ್ರುವರಿ/ ಮಾರ್ಚ್ ತಿಂಗಳ ಸಂಬಳದಿಂದಲೂ ಮತ್ತು ಮುಂಬರುವ ವರ್ಷಗಳಲ್ಲಿ ಪ್ರತಿ ವರ್ಷ ಜನವರಿ ಅಥವಾ ಫೆಬ್ರುವರಿ ತಿಂಗಳ ಸಂಬಳದಿಂದ ಕಡಿತ ಮಾಡಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ಸಂದಾಯ ಮಾಡಬಹುದೆಂದು ರಾಜ್ಯದ ಎಲ್ಲಾ ಖಜಾನೆ ಅಧಿಕಾರಿಗಳು ಮತ್ತು ವೇತನ ಬಟವಾಡೆ ಅಧಿಕಾರಿಗಳಿಗೆ ಈ ಮೂಲಕ ಸೂಚಿಸಲಾಗಿದೆ.

4) ಪ್ರತಿಯೊಬ್ಬ ನೌಕರನಿಂದ ಸಂಘದ ವಾರ್ಷಿಕ ವಂತಿಗೆಗೆ ಸಂಬಳದಿಂದ ಕಡಿತಗೊಳಿಸಲು ಸಮ್ಮತಿ ಪತ್ರ ಪಡೆದು ದಾಖಲೆಯಲ್ಲಿ ಇರಿಸುವುದು. ಈ ರೀತಿ ಸಮ್ಮತಿ ಪತ್ರವನ್ನು ಪ್ರಸ್ತುತ ವರ್ಷದಲ್ಲಿ ಕೂಡಲೇ ಪಡೆಯಬಹುದಾಗಿದೆ ಮತ್ತು ಮುಂದಿನ ವರ್ಷಗಳಲ್ಲಿ ನವೆಂಬರ್/ಡಿಸೆಂಬರ್ ತಿಂಗಳುಗಳಲ್ಲಿ ಪಡೆಯಬಹುದಾಗಿದೆ.

5) ಸದಸ್ಯತ್ವ ಶುಲ್ಕವನ್ನು ಕಡಿತಗೊಳಿಸಿ, ಸಂಘಕ್ಕೆ ಪಾವತಿ ಮಾಡಲು ದಿನಾಂಕ:24.12.1993ರ ಸರ್ಕಾರಿ ಆದೇಶದಲ್ಲಿ ನಿಗಧಿಪಡಿಸಿದ ವಿಧಾನವನ್ನು ಅನುಸರಿಸುವಂತೆ ಸೂಚಿಸಲಾಗಿದೆ.

**ದೇವರಾಜು**
ಪಿ.ಆರ್. 1610
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-1).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಇ-ಗೌರ್ನೆನ್ಸ್ ವಿಭಾಗದ ಉಪ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 81 ಆಸೇವ 2003, ದಿನಾಂಕ 27.8.2003.
2. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 77 ಸಸಿವಿ 2003, ದಿನಾಂಕ 27.10.2003.
3. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 86 ಸಸಿವಿ 2004, ದಿನಾಂಕ 8.11.2004.
4. ಅನಧಿಕೃತ ಟಿಪ್ಪಣಿ ಸಂಖ್ಯೆ:ಸಿಆಸುಇ 42 ಇಆಇ 2004, ದಿನಾಂಕ 26.10.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ:27.8.2003ರ ಅಧಿಸೂಚನೆಯಲ್ಲಿ ಶ್ರೀಮತಿ ಜಿ. ಸತ್ಯವತಿ, ಕೆ.ಎ.ಎಸ್.(ಹಿ.ಶ್ರೇ) ಇವರನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಆ.ಸು.) ವಿಭಾಗದಲ್ಲಿ ಹೊಸದಾಗಿ ಸೃಜಿಸಲಾದ ಉಪ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿರುತ್ತದೆ.

ಈ ಕಾರಣದಿಂದಾಗಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ದಿನಾಂಕ:27.10.2003ರ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಆ.ಸು) ವಿಭಾಗದಲ್ಲಿ ಹೊಸದಾಗಿ ಸೃಜಿಸಲಾದ ಉಪ ಕಾರ್ಯದರ್ಶಿ ಹುದ್ದೆಯನ್ನು ಒಂದು ವರ್ಷದ ಅವಧಿಗೆ ಈ ಕೆಳಕಂಡ ಹುದ್ದೆಗಳೊಂದಿಗೆ ಸೃಜಿಸಲಾಗಿದೆ.

| | | |
|---|---|---|
| 1. | ಹಿರಿಯ ಶೀಘ್ರಲಿಪಿಗಾರ | 1 ಹುದ್ದೆ |
| 2. | ಹಿರಿಯ ಸಹಾಯಕ | 1 ಹುದ್ದೆ |
| 3. | ದಲಾಯತ್ | 1ಹುದ್ದೆ |

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ದಿನಾಂಕ:8.11.2004ರ ಆದೇಶದಲ್ಲಿ ಸರ್ಕಾರದ ಉಪ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ : 9.9.2004 ರಿಂದ ಒಂದು ವರ್ಷದ ಅವಧಿಯವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ:(4)ರಲ್ಲಿ ಓದಲಾಗಿರುವ ದಿನಾಂಕ: 26.10.2005 ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಕಾರ್ಯದರ್ಶಿ, (ಇ- ಆಡಳಿತ) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆ.ಸು) ರವರು ಸದರಿ ಉಪ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಇನ್ನೂ 2 ವರ್ಷಗಳವರೆಗೆ ಮುಂದುವರಿಸಲು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು , ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 68 ಸಸಿವಿ 2005, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇ-ಗೌರ್ನೆನ್ಸ್ (ಆ.ಸು) ವಿಭಾಗದಲ್ಲಿ ಸೃಜಿಸಲಾಗಿರುವ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ಅದರ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:9.9.2005 ರಿಂದ 2 ವರ್ಷಗಳವರೆಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಪಿ.ಆರ್. 1611 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಇಂಧನ ಸಚಿವಾಲಯ

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಆದೇಶ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆಆರ್‌ಇಡಿ/08/MVH-DEM-Vol-III/2005/1806 ದಿನಾಂಕ 29.9.2005.
2. ದಿನಾಂಕ:30.9.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ. Karnataka Renewable Energy Development Limited ಸಂಸ್ಥೆಗೆ ಬೆಳಗಾಂ ಜಿಲ್ಲೆಯ ರಾಯಬಾಗ್ ತಾಲ್ಲೂಕಿನ ಮಾವಿನಹುಂಡ ಎಂಬಲ್ಲಿ 6.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2) ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ 21 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕುಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 305 ಎನ್‌ಸಿಇ 2005, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2005**

ಮೆ: Karnataka Renewable Energy Development Limited ಸಂಸ್ಥೆಗೆ ಬೆಳಗಾಂ ಜಿಲ್ಲೆಯ ರಾಯಬಾಗ್ ತಾಲ್ಲೂಕಿನ ಮಾವಿನಹುಂಡ ಎಂಬಲ್ಲಿ 6.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ:

1. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮವು ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳುವುದು.
2. ಸಂಬಂಧಿಸಿದ ಎಸ್ಕಾಂಗಳೊಂದಿಗೆ Power Evacuation ಮಾಡಿಕೊಳ್ಳುವುದು.
3. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
4. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
5. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1592 **ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ :** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ :**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ಎಸ್.ಡಿ.ಎಲ್./2005/1722 ದಿನಾಂಕ:17.9.2005.
2. ದಿನಾಂಕ 30.9.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

ಪ್ರಸ್ತಾವನೆ:–

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಮೆ.ಸುಜ್ಲಾನ್ ಇನ್‌ಪ್ರಾಸ್ಟ್ರಕ್ಚರ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಒಟ್ಟು 30.60 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹ0ಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ 3 ರಲ್ಲಿ ಅನುಮೋದಿಸಿದ್ದರನ್ವಯ ಕೂಲ0ಕಷವಾಗಿ ಪರಿಶೀಲಿಸಿದ್ದು ನ0ತರ ಈ ಕೆಳಗಿನ0ತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 269 ಎನ್‌ಸಿಇ 2005 ಬೆಂಗಳೂರು, ದಿನಾಂಕ 14ನೇ ಅಕ್ಟೋಬರ್ 2005**

ಮೆ॥ ಸುಜ್ಲಾನ್ ಇನ್‌ಪ್ರಾಸ್ಟ್ರಕ್ಚರ್ ಲಿಮಿಟೆಡ್ ಕಂಪನಿಗೆ, ಶಿವಮೊಗ್ಗ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಒಟ್ಟು 30.60 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl. No. | Proposed capacity in MW | Near by villages of the proposed area | Geographical area description of the project |
|---|---|---|---|
| 1 | 15 MW | Tirumalapura, Santhanahalli, Vishwanathana halli, Gollarahalli, Shimoga district. | The proposed area is a mixture of complex terrain plains and has a 5 non contiguous NW-SE oriented ridges and the plain are located on East and West of Avinahatti. The proposed areas are held by the following Geographical co-ordinates:<br>**Latitude**: 13°53' 22" - 14°0'0"N<br>**Longitude**: 76°8' 48"- 76°15' 0" E<br>**Ridge peaks:** 1001, 1150,1141, 1003, 1004, 749m Amsl |
| 2 | 9.6 MW | Karakalaghatta, Lakshmipura, tamanayakana halli, Aiyanapalya, Mandya district. | The potential area-A is identified as a large plain and has no significant direction is located on the West of Anekal town and has several higher elevations and the proposed area is surrounded by number of villages as mentioned in column(4) and held in the following Geographical co-ordinates.<br>**Latitude**: 12°41' 6''- 12°44' 4" N<br>**Longitude**: 77°37'53"- 77°40'20" E<br>**Ridge peaks:** 947,957,913,921,937,947m Amsl |
| | 6 MW | Dasiripalli, Chudasandiram, Anumanakkal, Mandya district. | The potential area-B is identified as a large plain and has no significant direction is located on the West of Tali town and has several higher elevations. The proposed are is surrounded by number of villages as mentioned in column (4) and are held in the following Geographical co-ordinates.<br>**Latitude**: 12°33'5"- 12°36'20" N<br>**Longitude**: 77°37'25"- 77°39'25" E<br>**Ridge peaks:** 929,904,948,953m Amsl |
| **Total 30.60 MW** | | | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ. ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿ0ದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ/ ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ದಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1579

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಸುವರ್ಣ ಕರ್ನಾಟಕ ಆಚರಣೆಯ ಸಂದರ್ಭದಲ್ಲಿ ಲಾಂಛನವನ್ನು ಬಳಸುವ ಕುರಿತು.

**ಓದಲಾಗಿದೆ:** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಪತ್ರ ಸಂ: ಕಸನಿ:2:ಸ್ವರ್ಣಜಯಂತಿ:2004-05, ದಿನಾಂಕ:15.9.2005.

**ಪ್ರಸ್ತಾವನೆ:**

ಕರ್ನಾಟಕವು ಏಕೀಕರಣಗೊಂಡು 2006ರ ನವೆಂಬರ್ 1ಕ್ಕೆ 50 ವರ್ಷಗಳು ತುಂಬುತ್ತಿವೆ. ಈ ಸುವರ್ಣ ಜಯಂತಿ ಆಚರಣೆಯನ್ನು ಅತ್ಯಂತ ಸಂಭ್ರಮ ಹಾಗೂ ರಚನಾತ್ಮಕವಾಗಿ ರಾಜ್ಯದ ಜನತೆ ಹಾಗೂ ಹೊರನಾಡಿನ ಕನ್ನಡಿಗರು ಆಚರಿಸಬೇಕೆಂಬುದು ಸರ್ಕಾರದ ಆಶಯವಾಗಿದೆ.

ಈ ಹಿನ್ನೆಲೆಯಲ್ಲಿ ಕರ್ನಾಟಕದ ಸುವರ್ಣ ಜಯಂತಿಯ ಅಂಗವಾಗಿ ಕರ್ನಾಟಕದ ಇತಿಹಾಸ, ಸಂಸ್ಕೃತಿ ಮತ್ತು ರಚನಾತ್ಮಕತೆಯನ್ನು ಬಿಂಬಿಸುವಂತಹ ಲಾಂಛನವನ್ನು ತಯಾರಿಸಲು ಸರ್ಕಾರವು ಉದ್ದೇಶಿಸಿದೆ. ಅದರಂತೆ ಮೇಲೆ ಓದಲಾದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ಸುವರ್ಣ ಕರ್ನಾಟಕ ಆಚರಣೆಯ ಸಂದರ್ಭದಲ್ಲಿ ಬಳಸಲು ತಜ್ಞ ಕಲಾವಿದರಿಂದ ರೂಪಿಸಿ ತಯಾರಿಸಿದ ಲಾಂಛನದ ಮಾದರಿಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 18 ಕರಅ 2005, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2005**

ಸುವರ್ಣ ಕರ್ನಾಟಕ ಆಚರಣೆ ಸಂದರ್ಭದಲ್ಲಿ ಸರ್ಕಾರದ ಎಲ್ಲಾ ಇಲಾಖೆಗಳು, ನಿಗಮಗಳು, ಮಂಡಳಿಗಳು, ಸ್ವಾಯತ್ತ ಸಂಸ್ಥೆಗಳು ಹಾಗೂ ಖಾಸಗಿ ಸಂಸ್ಥೆಗಳು, ಏಕರೂಪವಾಗಿ ಬಳಸಬಹುದಾದ ಈ ಕೆಳಕಂಡ ವಿವರಗಳನ್ನೊಳಗೊಂಡ ಸುವರ್ಣ ಕರ್ನಾಟಕ ಲಾಂಛನವನ್ನು ಬಳಸಲು ಸರ್ಕಾರವು ಅನುಮೋದನೆ ನೀಡಿದೆ.

1. ಸಪ್ತ ವರ್ಣದಿಂದ ಕೂಡಿದ ಕಾಮನ ಬಿಲ್ಲನ್ನು ಒಳಗೊಂಡಿದೆ.
2. ಸಪ್ತ ವರ್ಣಗಳಲ್ಲಿ ಸಂತೋಷ, ಉಜ್ವಲ ಭವಿಷ್ಯ ಶಾಂತಿ, ತ್ಯಾಗ ಶೌರ್ಯ, ಮೊದಲಾದ ಭಾವನೆಗಳು ವ್ಯಕ್ತವಾಗುತ್ತಿವೆ. ಒಟ್ಟಾರೆ ಈ ಲಾಂಛನ ಕ್ರಿಯಾಶೀಲತೆಯ, ಜೀವನ ವೈವಿಧ್ಯತೆಯ ಸಂಕೇತವಾಗಿದೆ.
3. ಈ ಲಾಂಛನವನ್ನು ಮೇಲೆ ಹೇಳಿದ ಎಲ್ಲಾ ಸಂಸ್ಥೆಗಳು/ಏಜೆನ್ಸಿಗಳು ತಮ್ಮ ಎಲ್ಲಾ ಬಗೆಯ ಪತ್ರ ವ್ಯವಹಾರಗಳು, ಆಹ್ವಾನ ಪತ್ರಿಕೆಗಳು, ಪುಸ್ತಕಗಳು, ಪ್ರಕಟಣೆಗಳು ಮುಂತಾದ ಎಲ್ಲಾ ಬಗೆಯ ಮುದ್ರಿತ ಸಾಮಗ್ರಿಯ ಮೇಲೆ ಬಳಸುವುದು.
4. ಮೇಲೆ ಹೇಳಿದ ಸಂಸ್ಥೆಗಳು ತಮ್ಮ ಸಮಾರಂಭದ ಬ್ಯಾನರ್‌ಗಳಲ್ಲಿ ಬಿತ್ತಿ ಪತ್ರಗಳಲ್ಲಿ ಜಾಹೀರಾತುಗಳಲ್ಲಿ ಈ ಲಾಂಛನವನ್ನು ಬಳಸುವುದು.
5. ಈ ಲಾಂಛನಕ್ಕೆ ಅಗೌರವ ತರುವ ರೀತಿಯಲ್ಲಿ ಬಳಕೆ ಮಾಡತಕ್ಕದಲ್ಲ.
6. ಈ ಲಾಂಛನವನ್ನು ಸಪ್ತವರ್ಣದಲ್ಲಿಯೇ ಮುದ್ರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 1614

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಕರ್ನಾಟಕ ರಾಜ್ಯ 5ನೇ ವೇತನ ಆಯೋಗ, ಸಚಿವಾಲಯ**

**ಅಧಿಕೃತ ಜ್ಞಾಪನ**

**ಸಂಖ್ಯೆ: ರಾವೇಆ/ 35/ 2005, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್, 2005**

ಕರ್ನಾಟಕ ಸರ್ಕಾರವು ಸರ್ಕಾರಿ ನೌಕರರು, ಅನುದಾನಿತ ಶಿಕ್ಷಣ ಸಂಸ್ಥೆಗಳ ನೌಕರರು, ಸ್ಥಳೀಯ ಸಂಸ್ಥೆಗಳ ನೌಕರರು ಹಾಗೂ ವಿಶ್ವವಿದ್ಯಾಲಯಗಳ ಬೋಧಕೇತರ ಸಿಬ್ಬಂದಿಗಳ ವೇತನ, ತುಟ್ಟಿಭತ್ಯೆ ಹಾಗೂ ಇತರ ಸೌಲಭ್ಯಗಳ ಬಗ್ಗೆ ಪರಿಶೀಲಿಸಿ, ಪರಿಷ್ಕರಿಸಿ ಸರ್ಕಾರಕ್ಕೆ ವರದಿ ನೀಡಲು ಆದೇಶ ಸಂಖ್ಯೆ:ಎಫ್‌ಡಿ 11 ಎಸ್‌ಆರ್‌ಪಿ 2003, ದಿನಾಂಕ:21.06.2005ರಲ್ಲಿ ರಾಜ್ಯ 5ನೇ ವೇತನ ಆಯೋಗವನ್ನು ಶ್ರೀ ಸಿ. ಗೋಪಾಲ ರೆಡ್ಡಿ, ಐ.ಎ.ಎಸ್.(ನಿವೃತ್ತ) ಇವರ ಅಧ್ಯಕ್ಷತೆಯಲ್ಲಿ ರಚಿಸಿದೆ.

ಆಯೋಗಕ್ಕೆ ವಹಿಸಲಾಗಿರುವ ಪರಿಶೀಲನಾಂಶಗಳ ಕುರಿತಂತೆ ಸಾರ್ವಜನಿಕರು, ಸೇವಾ ಸಂಘಗಳು ಹಾಗೂ ಸರ್ಕಾರಿ ನೌಕರರು ಅಲ್ಲದೆ ಇಲಾಖೆಗಳಿಂದ, ಸಂಸ್ಥೆಗಳಿಂದ ಮಾಹಿತಿ ಹಾಗೂ ಮುಕ್ತ ಸಲಹೆಗಳನ್ನು ಪಡೆಯುವ ಉದ್ದೇಶವನ್ನು ಗಮನದಲ್ಲಿಟ್ಟುಕೊಂಡು ಆಯೋಗವು ಕೆಳಕಂಡ ಏಳು ವಿವಿಧ ಪ್ರಶ್ನಾವಳಿಗಳನ್ನು ತಯಾರಿಸಿದೆ.

1. ಸಾಮಾನ್ಯ ಪ್ರಶ್ನಾವಳಿ
2. ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರಶ್ನಾವಳಿ.
3. ಇಲಾಖಾ ಮುಖ್ಯಸ್ಥರುಗಳಿಗೆ ಪ್ರಶ್ನಾವಳಿ
4. ವಿಶ್ವವಿದ್ಯಾಲಯಗಳ ಬೋಧಕೇತರ ಸಿಬ್ಬಂದಿವರ್ಗದವರಿಗೆ ಪ್ರಶ್ನಾವಳಿ.
5. ಅನುದಾನಿತ ಶಿಕ್ಷಣ ಸಂಸ್ಥೆಗಳಿಗೆ ಪ್ರಶ್ನಾವಳಿ.
6. ಸ್ಥಳೀಯ ಸಂಸ್ಥೆಗಳಿಗೆ ಪ್ರಶ್ನಾವಳಿ.
7. ನಿವೃತ್ತಿ ವೇತನದಾರರಿಗೆ ಪ್ರಶ್ನಾವಳಿ.

ಆಸಕ್ತ ಸಾರ್ವಜನಿಕರು, ಸಂಘಸಂಸ್ಥೆಗಳು, ಸರ್ಕಾರಿ ನೌಕರರು ಸಾಮಾನ್ಯ ಪ್ರಶ್ನಾವಳಿಯಲ್ಲಿನ ಅಂಶಗಳಿಗೆ ಉತ್ತರಗಳನ್ನು ತಮ್ಮ ಅನಿಸಿಕೆ ಹಾಗೂ ಮುಕ್ತ ಸಲಹೆಗಳೊಂದಿಗೆ **ಉಪಕಾರ್ಯದರ್ಶಿ, ಕರ್ನಾಟಕ ರಾಜ್ಯ 5ನೇ ವೇತನ ಆಯೋಗ, 4ನೇ ಮಹಡಿ, 5ನೇ ಹಂತ, ಬಹುಮಹಡಿಗಳ ಕಟ್ಟಡಗಳು, ಡಾ:ಅಂಬೇಡ್ಕರ್ ವೀದಿ, ಬೆಂಗಳೂರು-560001,** ಇವರಿಗೆ **ದಿನಾಂಕ:31.01.2006**ರೊಳಗೆ ಸಲ್ಲಿಸುವಂತೆ ಕೋರಿದೆ.

**ಕೆ.ಆರ್. ರಾಮದುರ್ಗ್**
ಉಪಕಾರ್ಯದರ್ಶಿ,
ಕರ್ನಾಟಕ ರಾಜ್ಯ 5ನೇ ವೇತನ ಆಯೋಗ.

**ಕರ್ನಾಟಕ ರಾಜ್ಯ ಐದನೇ ವೇತನ ಆಯೋಗ**

**ಸಾಮಾನ್ಯ ಪ್ರಶ್ನಾವಳಿ**

**ಭಾಗ-ಎ**

**ಸಾಮಾನ್ಯ ತತ್ವಗಳು**

**ಪ್ರಾಸ್ತಾವಿಕ ಪರಿಚ್ಛೇದ:**

1. ಸರ್ಕಾರಿ ನೌಕರರ ವೇತನ ಶ್ರೇಣಿ/ಹೊಸ ವೇತನ ರಚನೆ ಕುರಿತು ಹಿಂದಿನ ವೇತನ ಆಯೋಗಗಳು ವಿಶಾಲವಾಗಿ ಅಳವಡಿಸಿಕೊಂಡಿರುವ ಸಾಮಾನ್ಯ ತತ್ವಗಳು ಈ ಕೆಳಕಂಡಂತಿವೆ.

1) ಅಗತ್ಯ ವಿದ್ಯಾರ್ಹತೆ
2) ತರಬೇತಿ
3) ಜವಾಬ್ದಾರಿಯ ಪ್ರಮಾಣ
4) ಕಾರ್ಯವ್ಯಾಪ್ತಿ ಕ್ಷೇತ್ರ
5) ವೃತ್ತಿ ಸಂಬಂಧಿ ತೊಂದರೆಗಳು
6) ನಿರ್ಣಯ ಕೈಗೊಳ್ಳುವ ಹಂತ
7) ಲಭ್ಯವಿರುವ ಬಡ್ತಿಯ ಅವಕಾಶಗಳು
8) ಇತರೆ ಇಲಾಖೆಗಳಲ್ಲಿರುವ ಅಂತಹುದೇ ಸಮಾನ ದರ್ಜೆಯ ಹುದ್ದೆಗಳ ಸಮಾನಾಂತರ ಹಾಗೂ ನೇರ ಸಂಬಂಧದ ತುಲನಾತ್ಮಕ ಸ್ವರೂಪ
9) ಅಧಿಕಾರಿಗಳ ನೇಮಕಾತಿ ಹಾಗೂ ಮುಂಬಡ್ತಿಗೆ ಸಂಬಂಧಿಸಿದಂತೆ ಇರುವ ಶಾಸನಬದ್ಧ ಮತ್ತು ಸಂವಿಧಾನಾತ್ಮಕ ನಿರ್ಬಂಧನೆಗಳು.
10) ಕಾಲಕಾಲಕ್ಕೆ ಆಗಿರುವ ವೇತನ ಶ್ರೇಣಿಗಳ ರಚನೆ ಕುರಿತು ಇರುವ ಐತಿಹಾಸಿಕ ಸಂಬಂಧಗಳು.

ನಿಮ್ಮ ಪರಿಣಿತ ಅಭಿಪ್ರಾಯದಲ್ಲಿ ಉದಾರೀಕರಣ, ಖಾಸಗೀಕರಣ ಹಾಗೂ ಸರ್ಕಾರಿ ಚಟುವಟಿಕೆಗಳು/ಸೇವೆಗಳನ್ನು ಹೊರಗುತ್ತಿಗೆ ನೀಡುತ್ತಿರುವ ಜಾಗತಿಕ ವಿದ್ಯಮಾನದಿಂದ ಉದ್ಭವಿಸಿರುವ ಈಗಿನ ಸಂಕೀರ್ಣ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮೇಲಿನ ಅಂಶಗಳು ಪ್ರಸ್ತುತವೆಂದು ಭಾವಿಸುತ್ತೀರಾ? ಇಲ್ಲದಿದ್ದಲ್ಲಿ, ತಮ್ಮ ಅಭಿಪ್ರಾಯದಲ್ಲಿ,ಯಾವ ಅಂಶಗಳು ಪ್ರಸ್ತುತ ಎಂಬುದನ್ನು ದಯವಿಟ್ಟು ಸೂಚಿಸಿರಿ.

2. ನಿಮ್ಮ ಪರಿಣಿತ ಅನಿಸಿಕೆ ಪ್ರಕಾರ ಸರ್ಕಾರದಿಂದ ಯಾವ ಕ್ರಮವನ್ನು ನಿರೀಕ್ಷಿಸುತ್ತೀರಿ;

i) ಸರ್ಕಾರಿ ನೌಕರರ ದಕ್ಷತೆ ಹೆಚ್ಚಿಸುವ ಕುರಿತು.
ii) ಸರ್ಕಾರಿ ನೌಕರರು ಸಾರ್ವಜನಿಕರೊಂದಿಗೆ ಹೆಚ್ಚಿನ ಸ್ನೇಹಭಾವದಿಂದ ಕರ್ತವ್ಯ ನಿರ್ವಹಿಸುವ ಕುರಿತು.

iii) ಸರ್ಕಾರಿ ನೌಕರರು ಸಾರ್ವಜನಿಕರ ಅಪೇಕ್ಷೆಗಳನುಸಾರ ಹೆಚ್ಚಿನ ಪ್ರಮಾಣದಲ್ಲಿ ಸ್ಪಂದಿಸುವ ಬಗ್ಗೆ.

iv) ಸರ್ಕಾರಿ ನೌಕರರ ಮನಸ್ಸಿನಲ್ಲಿ ಕರ್ತವ್ಯ ನಿಷ್ಠೆಗೆ ಬದ್ಧವಾಗಿರಲು ನೆಲೆಗೊಳ್ಳುವ ಬಗ್ಗೆ.

3. ಸರ್ಕಾರದ ಮೂಲಭೂತ ಉದ್ದೇಶಗಳು ಕೆಳಕಂಡಂತಿವೆ.

ಎ) ಕಾನೂನು ಮತ್ತು ಸುವ್ಯವಸ್ಥೆ ಕಾಪಾಡುವುದು.

ಬಿ) ಮೂಲಭೂತ ಸಾಮಾಜಿಕ ಸೇವೆ ಮತ್ತು ಮೂಲ ಸೌಕರ್ಯಗಳನ್ನು ಒದಗಿಸುವುದು.

ಸಿ) ಸಮಾಜದ ಶೋಷಿತ ವರ್ಗಗಳನ್ನು ಕಾಪಾಡುವುದು.

ಡಿ) ಪರಿಸರವನ್ನು ಸಂರಕ್ಷಿಸುವುದು.

ಈ ಗುರಿಯನ್ನು ಸಾಧಿಸಲು, ಸರ್ಕಾರವು ವಿವಿಧ ಇಲಾಖೆಗಳ ಹಲವು ಹಂತಗಳಲ್ಲಿ ಸುಮಾರು 5.32 ಲಕ್ಷ ನೌಕರರುಗಳನ್ನು ನೇಮಕ ಮಾಡಿದೆ. ಈ 5.32 ಲಕ್ಷ ನೌಕರರ ಪೈಕಿ ಶೇಕಡ 80 ರಷ್ಟು ನೌಕರರು ಪೋಲೀಸ್, ಆರೋಗ್ಯ, ಶಿಕ್ಷಣ, ಗ್ರಾಮೀಣಾಭಿವೃದ್ಧಿ, ನೀರಾವರಿ, ಕೃಷಿ ಮತ್ತು ಸಮಾಜ ಕಲ್ಯಾಣ ವಿಭಾಗಗಳಲ್ಲಿ ನೇಮಕಗೊಂಡಿದ್ದು ಇವರುಗಳು ಸರ್ಕಾರದ ಮೂಲಭೂತ ಉದ್ದೇಶಗಳ ಗುರಿ ಸಾಧಿಸಲು ಪ್ರಮುಖವಾಗಿ ಜವಾಬ್ದಾರರಾಗಿರುತ್ತಾರೆ. ಈ ಅಂಶ ಗಣನೆಗೆ ತೆಗೆದುಕೊಂಡು, 2004–05ರ ಅವಧಿಯಲ್ಲಿ ರಾಜ್ಯ ಸರ್ಕಾರವು ನೌಕರರಿಗೆ ತನ್ನ ಒಟ್ಟು ವೆಚ್ಚದಲ್ಲಿ ಸುಮಾರು ಶೇಕಡ 15.82 ರಷ್ಟನ್ನು ಸಂಬಳಕ್ಕಾಗಿ ಖರ್ಚು ಮಾಡಿರುವುದು ಹೆಚ್ಚೆಂದು ತಾವು ಭಾವಿಸುತ್ತೀರಾ? ನಿಮ್ಮ ಅಭಿಪ್ರಾಯದಲ್ಲಿ ರಾಜ್ಯವು ತನ್ನ ಒಟ್ಟು ವೆಚ್ಚದಲ್ಲಿ ಗರಿಷ್ಠ ಎಷ್ಟು ಭಾಗವನ್ನು ರಾಜ್ಯ ಸರ್ಕಾರಿ ನೌಕರರ ಸಂಬಳಕ್ಕಾಗಿ ವೆಚ್ಚ ಮಾಡಬಹುದು? ಅಲ್ಲದೇ, ಸರ್ಕಾರವು ತನ್ನ ಒಟ್ಟು ವೆಚ್ಚದಲ್ಲಿ, ಸಂಬಳಕ್ಕಾಗಿ ಎಷ್ಟು ಭಾಗವನ್ನು ವೆಚ್ಚ ಮಾಡಬಹುದು ಎಂಬ ಬಗ್ಗೆ ತಮ್ಮ ಬೇರೆ ಸಲಹೆಗಳೇನಾದರೂ ಇದ್ದಲ್ಲಿ ಸಕಾರಣಗಳೊಂದಿಗೆ ನೀಡಲು ಕೋರಿದೆ.

4. ಸರ್ಕಾರಿ ನೌಕರರ ವೇತನಗಳನ್ನು ಹೆಚ್ಚಿಸುವುದರಿಂದ ಉಂಟಾಗುವ ಒಟ್ಟು ಪರಿಣಾಮವನ್ನು ಒಂದು ಸೂಕ್ತ ಪರಿಮಿತಿಯಲ್ಲಿಡುವ ಸಲುವಾಗಿ ಸರ್ಕಾರದ ವೆಚ್ಚಗಳಲ್ಲಿ ಮಿತವ್ಯಯ ಸಾಧಿಸಲು ನೀವು ಯಾವುದಾದರು ನಿರ್ದಿಷ್ಟ ಸಲಹೆಗಳನ್ನು ಸೂಚಿಸುವಿರಾ?

5. ಆಯೋಗವು ನೆರೆ ರಾಜ್ಯಗಳ ಹಾಗೂ ಕೇಂದ್ರ ಸರ್ಕಾರದಲ್ಲಿ ಹಾಲಿ ಜಾರಿಯಲ್ಲಿರುವ ವೇತನ ಶ್ರೇಣಿಗಳನ್ನು ಗಮನದಲ್ಲಿರಿಸಿಕೊಳ್ಳುವುದು ಅವಶ್ಯಕವಿದೆ. ನಿಮ್ಮ ಅಭಿಪ್ರಾಯದಲ್ಲಿ ಇಂತಹ ಹೋಲಿಕೆ ಸೂಕ್ತವೆ? ಮತ್ತು ನೌಕರರ ವೇತನ ಶ್ರೇಣಿ ಮತ್ತು ಭತ್ಯೆಗಳ ಕುರಿತಂತೆ, ಹೋಲಿಸಬಹುದಾದ ಹಂತಗಳಲ್ಲಿ ಸಾಮ್ಯತೆಯನ್ನು ಎಷ್ಟರಮಟ್ಟಿಗೆ ಪರಿಗಣಿಸಬಹುದು, ದಯವಿಟ್ಟು ಕಾರಣಗಳನ್ನು ನೀಡಿರಿ.

6. ಸರ್ಕಾರಿ ನೌಕರರಿಗೆ ತಮ್ಮ ಸೇವಾ ಅವಧಿಯಲ್ಲಿ ಮುಂಬಡ್ತಿಗೆ ಅವಕಾಶವು ಕಡಿಮೆ ಪ್ರಮಾಣದಲ್ಲಿ ಎಂಬ ಅಭಿಪ್ರಾಯವು ಸಾಮಾನ್ಯವಾಗಿದೆ. ನಿಮ್ಮ ಅಭಿಪ್ರಾಯದಲ್ಲಿ ಸರ್ಕಾರಿ ನೌಕರರಿಗೆ ತಮ್ಮ ಸೇವಾ ಅವಧಿಯಲ್ಲಿ ಕನಿಷ್ಠ ಎಷ್ಟು ಮುಂಬಡ್ತಿಗೆ ಅವಕಾಶಗಳಿರಬೇಕು? ಮುಂಬಡ್ತಿ ಸಂದರ್ಭದಲ್ಲಿ ನೀಡಬಹುದಾದ ಸಮಂಜಸವಾದ ಆರ್ಥಿಕ ಸೌಲಭ್ಯಗಳು ಎಷ್ಟಿರಬೇಕು. ಪ್ರಸ್ತುತ, ಒಬ್ಬ ಸರ್ಕಾರಿ ನೌಕರ ತನ್ನ ಮುಂಬಡ್ತಿ ಸಂದರ್ಭದಲ್ಲಿ ಒಂದು ವೇತನ ಬಡ್ತಿಗೆ ಅರ್ಹರಿರುವನು. (ಇದು ನೌಕರನ ವೃಂದದ ಆಧಾರದ ಮೇಲೆ ಸಾಮಾನ್ಯವಾಗಿ ತಿಂಗಳಿಗೆ ರೂ. 100 ರಿಂದ 500ರ ವರೆಗೆ ಇರುತ್ತದೆ)

7. ಸರ್ಕಾರಿ ಸೇವೆಯಲ್ಲಿ ವೇತನ ವ್ಯವಸ್ಥೆಯು, ಉತ್ತಮ ಕಾರ್ಯ ನಿರ್ವಹಣೆಗೆ ಪ್ರೋತ್ಸಾಹ ನೀಡುವಂತಿರಬೇಕು, ಹಾಗೂ ಸೇವೆಯಲ್ಲಿ ಮುಂದುವರಿಯಬೇಕೆಂಬ ಭಾವನೆಯನ್ನು ನೌಕರರಲ್ಲಿ ಮೂಡಿಸಿ, ತಮ್ಮ ಕರ್ತವ್ಯಗಳನ್ನು ದಕ್ಷತೆಯಿಂದ ಮತ್ತು ಪ್ರಾಮಾಣಿಕವಾಗಿ ನಿರ್ವಹಿಸುವಂತೆ ಅವರನ್ನು ಪ್ರೇರೇಪಿಸುವ ಸಲುವಾಗಿ, ವೇತನ ವ್ಯವಸ್ಥೆ ನ್ಯಾಯೋಚಿತವಾಗಿರಬೇಕೆಂಬ ಅವರ ಸಮಂಜಸವಾದ ಆಶೋತ್ತರಗಳನ್ನು ಈಡೇರಿಸುವಂತಿರಬೇಕು ಎಂದು ನೀವು ಭಾವಿಸುವಿರಾ?

## ಭಾಗ–ಬಿ

## ವೇತನ ಶ್ರೇಣಿಗಳು

1. ಪ್ರಸ್ತುತ ವೇತನ ಶ್ರೇಣಿಗಳನ್ನು ಅನುಬಂಧ–ಬಿ ನಲ್ಲಿ ಪಟ್ಟಿ ಮಾಡಲಾಗಿದೆ. ಈ ಶ್ರೇಣಿಗಳನ್ನು ದಿನಾಂಕ: 01–01–1996 ರಂದು ಪಡೆಯುತ್ತಿದ್ದ ತುಟ್ಟಿಭತ್ಯೆ ವಿಲೀನಗೊಳಿಸಿ, ಸೂಚ್ಯಂಕದ ಮಟ್ಟ 1510ರ ಬಿಂದುವಿಗೆ ರೂಪಿಸಲಾಗಿದೆ. (ಎಐಎಸಿಪಿಐ) (306 ಬಿಂದು ಆಧಾರ 1982=100) ಈ ಶ್ರೇಣಿಗಳು 01–04–1998 ರಿಂದ ಜಾರಿಯಲ್ಲಿವೆ.

2. ಕಾಲಕಾಲಕ್ಕೆ ವೇತನ ಶ್ರೇಣಿಗಳನ್ನು ಸುವ್ಯವಸ್ಥೀಕರಣಗೊಳಿಸಿರುವುದರಿಂದಾಗಿ ಅವುಗಳ ಸಂಖ್ಯೆಯು ಪ್ರಸ್ತುತ 20ಕ್ಕೆ ಸೀಮಿತವಾಗಿದೆ (ಅನುಬಂಧ–ಬಿ). ಈ ವೇತನ ಶ್ರೇಣಿಗಳ ಸಂಖ್ಯೆಯು ತಕ್ಕುದಾಗಿದೆಯೆಂದು ನೀವು ಭಾವಿಸುತ್ತೀರಾ, ಇಲ್ಲದಿದ್ದಲ್ಲಿ, ಕಾರಣಗಳನ್ನು ನೀಡಿರಿ.

3. ಸರ್ಕಾರವು ದಿನಾಂಕ: 01–07–1986 ರಿಂದ ಜಾರಿಗೊಳಿಸಿರುವ ಮಾಸ್ಟರ್ ವೇತನ ಶ್ರೇಣಿಗಳ ಬಗ್ಗೆ ಹಾಗೂ ಈ ಮಾಸ್ಟರ್ ಶ್ರೇಣಿಯನ್ನು 20 ಪ್ರತ್ಯೇಕ ವೇತನ ಶ್ರೇಣಿಗಳಾಗಿ ವಿಭಾಗಿಸಿರುವ ಬಗ್ಗೆ ನಿಮ್ಮ ಅಭಿಪ್ರಾಯವೇನು? ಇದು ಅನುಕೂಲಕರವಾಗಿದೆಯೆಂದು ಭಾವಿಸುವಿರಾ? ಇಲ್ಲದಿದ್ದಲ್ಲಿ, ನಿಮ್ಮ ಅಭಿಪ್ರಾಯ ಮತ್ತು ಸಲಹೆಗಳಿದ್ದಲ್ಲಿ, ನೀಡುವುದು.

4. ಸರ್ಕಾರಿ ನೌಕರರುಗಳ ಪ್ರಸ್ತುತ ವೇತನ ಶ್ರೇಣಿಯನ್ನು ದಿನಾಂಕ: 01–01–1996 ರಂದು ಇದ್ದ 12 ತಿಂಗಳ ಸರಾಸರಿ ಬಳಕೆದಾರರ ಬೆಲೆ ಸೂಚ್ಯಂಕದ 1510 ಎಐಎಸಿಪಿಐ ಸೂಚ್ಯಂಕದ ಬಿಂದುವಿನ (306 ಬಿಂದು ಆಧಾರ–1982=100) ಆಧಾರದ ಮೇಲೆ ರೂಪಿಸಲಾಗಿದೆ. ನೂತನ ವೇತನ ಶ್ರೇಣಿ ರಚನೆಯು ಎಐಎಸಿಪಿಐಯ ಯಾವ ಬಿಂದು ಆಧಾರದ ಮೇಲೆ ರೂಪಿಸಬೇಕು ಎಂಬುದರ ಬಗ್ಗೆ ನಿಮ್ಮ ಅಭಿಪ್ರಾಯ ನೀಡುವುದು.

5(ಎ). ಬೆಂಗಳೂರಿನಲ್ಲಿ ಗ್ರೂಪ್–ಡಿ ನೌಕರರಿಗೆ ಪ್ರಸ್ತುತ ಮಾಹೆಯಾನ ಪಾವತಿ ಮಾಡುತ್ತಿರುವ ಕನಿಷ್ಠ ವೇತನ ರೂ. 4,560.00 ಆಗಿರುತ್ತದೆ (ವೇತನ+ತುಟ್ಟಿಭತ್ಯೆ+ಮನೆಬಾಡಿಗೆ ಭತ್ಯೆ+ನಗರ ಪರಿಹಾರ ಭತ್ಯೆ ಸೇರಿ). ಹಾಲಿ ಜೀವನ ವೆಚ್ಚವನ್ನು ಪರಿಗಣಿಸಿದ್ದಲ್ಲಿ ಈ ಮೊತ್ತವು ತಕ್ಕುದಾದುದೆಂದು ನೀವು ಭಾವಿಸುವಿರಾ, ಇಲ್ಲದಿದ್ದಲ್ಲಿ ನಿಮ್ಮ ದೃಷ್ಟಿಯಲ್ಲಿ ಕನಿಷ್ಠ ವೇತನವು ಎಷ್ಟಿರಬೇಕು? ಹಾಗೂ ಈ ಕನಿಷ್ಠ ವೇತನವನ್ನು ನಿಗದಿಪಡಿಸಲು ಯಾವ ತತ್ವವನ್ನು ನೀವು ಸೂಚಿಸಬಯಸುವಿರಿ?

(ಬಿ) ಬೆಂಗಳೂರಿನಲ್ಲಿ ಅತಿ ಉನ್ನತ ದರ್ಜೆಯ ಅಧಿಕಾರಿಗೆ ಸರ್ಕಾರವು ಪ್ರಸ್ತುತ ನೀಡುತ್ತಿರುವ ಒಟ್ಟು ಗರಿಷ್ಠ ವೇತನವು ಮಾಹೆಯಾನ ರೂ. 34,645.00 ಇರುತ್ತದೆ (ವೇತನ+ತುಟ್ಟಿಭತ್ಯೆ+ಮನೆಬಾಡಿಗೆ ಭತ್ಯೆ+ನಗರ ಪರಿಹಾರ ಭತ್ಯೆ ಸೇರಿ). ಈಗಿನ ಜೀವನ ವೆಚ್ಚವನ್ನು ಪರಿಗಣಿಸಿದಲ್ಲಿ ಇದು ತಕ್ಕುದಾದುದೆಂದು ನೀವು ಪರಿಗಣಿಸುವಿರಾ? ಇಲ್ಲದಿದ್ದಲ್ಲಿ, ನಿಮ್ಮ ದೃಷ್ಟಿಯಲ್ಲಿ ಗರಿಷ್ಠ ವೇತನವು ಎಷ್ಟಿರಬೇಕು? ಹಾಗೂ ಈ ಗರಿಷ್ಠ ವೇತನ ನಿಗಧಿ ಮಾಡಲು ಯಾವ ತತ್ವವನ್ನು ನೀವು ಸೂಚಿಸಬಯಸುವಿರಿ?

6. ಈಗ ಅತ್ಯಂತ ಕೆಳಗಿನ ವೇತನ ಶ್ರೇಣಿಯ ಕನಿಷ್ಠ ವೇತನ ಮತ್ತು ಅತ್ಯಂತ ಮೇಲಿನ ವೇತನ ಶ್ರೇಣಿಯ ಕನಿಷ್ಠ ವೇತನ– ಇವುಗಳ ನಡುವಿನ ಅಂತರ ಅನುಪಾತ 1:7.2 ರಷ್ಟಿದ್ದು ಅತ್ಯಂತ ಕೆಳಗಿನ ವೇತನ ಶ್ರೇಣಿಯ ಗರಿಷ್ಠ ವೇತನ ಮತ್ತು ಅತ್ಯಂತ ಮೇಲಿನ ವೇತನ ಶ್ರೇಣಿಯ ಗರಿಷ್ಠ ವೇತನ –ಇವುಗಳ ನಡುವಿನ ಅಂತರದ ಅನುಪಾತ 1:6ರಷ್ಟಿದೆ. ಇವುಗಳಿಗೆ ಸಂಬಂಧಿಸಿದಂತೆ, ಈಗಿನ ತೆರಿಗೆ ಸ್ವರೂಪವನ್ನು ಕೂಡ ಗಮನದಲ್ಲಿಟ್ಟುಕೊಂಡಾಗ, ಈ ಅಂತರದ ಅನುಪಾತ ನಿಮ್ಮ ಅಭಿಪ್ರಾಯದಲ್ಲಿ ಎಷ್ಟಿರಬೇಕು?

7. ವಿವಿಧ ವೇತನ ಶ್ರೇಣಿಗಳ ನಡುವೆ ಈಗ ಇರುವ ಸಾಪೇಕ್ಷತೆಯು, ವಿವಿಧ ಹಂತಗಳ ಜವಾಬ್ದಾರಿಗೆ ಅನುಗುಣವಾಗಿದೆಯೇ? ಯಾವುದಾದರೂ ಬದಲಾವಣೆ ಅಗತ್ಯವೆಂದು ನಿಮಗನ್ನಿಸಿದಲ್ಲಿ ದಯವಿಟ್ಟು ಕಾರಣಗಳನ್ನು ತಿಳಿಸಿರಿ.

8. 'ಸಮಾನ ಕೆಲಸಕ್ಕೆ ಸಮಾನ ವೇತನ' ಎಂಬ ಈ ತತ್ವಗಳನ್ನಾಧರಿಸಿ ವಿವಿಧ ಹಂತಗಳಲ್ಲಿ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳ ನಡುವೆ ಅಥವಾ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಇಲಾಖೆಗಳ ನಡುವೆ ಕೆಲಸ ಕಾರ್ಯಗಳ ಸಮಾನತೆಯನ್ನು ಗುರುತಿಸುವದು ಸಾಧ್ಯವೇ?

(ಎ) ಯಾವುದೇ ಒಂದು ಉದ್ಯೋಗವೃಂದ (ಕೇಡರ್)ದಲ್ಲಿರುವ ಕೆಲವೊಂದು ನೌಕರರು ತಮ್ಮ ಸಹೋದ್ಯೋಗಿಗಳಿಗಿಂತ ಅಥವಾ ಸದರಿ ಹುದ್ದೆಗೆ ನಿಗಧಿ ಮಾಡಿರುವುದಕ್ಕಿಂತ ಹೆಚ್ಚಿನ ವಿದ್ಯಾರ್ಹತೆಯುಳ್ಳವರಾಗಿದ್ದಲ್ಲಿ, ಅಂತಹವರಿಗೆ ಹೆಚ್ಚಿನ ವೇತನವನ್ನು ಕೊಡಬೇಕೆಂಬ ಅಭಿಪ್ರಾಯವನ್ನು ಕೆಲವರು ಮುಂದಿಡುತ್ತಾರೆ. ಈ ದಿಶೆಯಲ್ಲಿ ಈ ರೀತಿ ವೇತನ ಹೆಚ್ಚಳವನ್ನು ಕೊಟ್ಟರೆ ಅದು 'ಸಮಾನ ಕೆಲಸಕ್ಕೆ ಸಮಾನ ವೇತನ', ವೆಂಬ ತತ್ವಕ್ಕೆ ವಿರುದ್ಧವಾಗುತ್ತದೆಂಬುದು ಇನ್ನೊಂದು ಅಭಿಪ್ರಾಯ. ನಿಮ್ಮ ಅನಿಸಿಕೆಯೇನು?

9. ಇಲಾಖೆಗಳಲ್ಲಿ ಇರುವ ವೃಂದಗಳ ಶ್ರೇಣಿಗಳ ಹಂತಗಳ ಸಂಖ್ಯೆಯು ಎಲ್ಲ ಇಲಾಖೆಗಳು/ ಸೇವೆಗಳು/ ವೃಂದಗಳಿಗೆ ಏಕರೂಪವಾಗಿರಬೇಕೆಂದು ನೀವು ಭಾವಿಸುತ್ತೀರಾ? ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ವೇತನ ಬಡ್ತಿಗಳು**

10. ತಮ್ಮ ದೃಷ್ಠಿಯಲ್ಲಿ ಕನಿಷ್ಠ ವೇತನ ಬಡ್ತಿ (increment) ದರವು ಎಷ್ಟಿರಬೇಕು? ಮತ್ತು ಯಾವುದೇ ಒಂದು ವೇತನ ಶ್ರೇಣಿಯಲ್ಲಿ ಅಥವಾ ಬೇರೆ ಬೇರೆ ವೇತನ ಶ್ರೇಣಿಗಳಲ್ಲಿನ ವೇತನ ಬಡ್ತಿಗಳ ನಡುವೆ ಯಾವ ರೀತಿಯ ಸಂಬಂಧವಿರಬೇಕು?

11. ಪರಿಷ್ಕೃತ ವೇತನ ಶ್ರೇಣಿಯಲ್ಲಿ ಚಾಲ್ತಿಯಲ್ಲಿರುವ ವೇತನ ಶ್ರೇಣಿಗಳ ಅನುಗುಣವಾಗಿ ವೇತನ ನಿಗಧಿಗೊಳಿಸುವಾಗ ಕೆಲವೊಂದು ಹಂತಗಳಲ್ಲಿ 'ಒಟ್ಟುಗೂಡುವ' (Bunching) ಸಂಭವಿಸುತ್ತದೆ. ಈ ರೀತಿ ಆಗಿದ್ದರೂ ಸಹ ಮೇಲ್ಮಟ್ಟದ ವೇತನ ಹಂತಗಳಲ್ಲಿ ಇರುವವರೂ ಕೂಡ ಸಾಕಷ್ಟು ಪ್ರಯೋಜನ ಪಡೆಯುವರೆಂಬ ಅಭಿಪ್ರಾಯವು ಇದೆ. ನೀವು ಇದನ್ನು ಒಪ್ಪುವಿರಾ? ಹೊಸ ಶ್ರೇಣಿಗಳಿಗೆ ಚಾಲ್ತಿಯಲ್ಲಿರುವ ಶ್ರೇಣಿಗಳನ್ನು ಹೊಂದಾಣಿಸುವ ಬಗ್ಗೆ ನೀವು ಯಾವ ಸೂತ್ರವನ್ನು ಸೂಚಿಸುವಿರಿ?

12. **ದಕ್ಷತಾ ತಡೆ (Efficiency bar):** ದಕ್ಷತೆಯನ್ನು ಸುಧಾರಿಸಲು ಒಂದು ವೇತನ ಶ್ರೇಣಿಯಲ್ಲಿ/ಸೇವಾ ಮಟ್ಟದಲ್ಲಿ ದಕ್ಷತಾ ತಡೆಯನ್ನು ಪ್ರಾರಂಭಿಸಬೇಕೆಂದು ಒತ್ತಾಯಪಡಿಸಲಾಗಿದೆ. ಈ ಬಗ್ಗೆ ನಿಮ್ಮ ಅಭಿಪ್ರಾಯಗಳೇನು? ದಕ್ಷತಾ ತಡೆಯನ್ನು ಅನುಷ್ಠಾನಕ್ಕೆ ತರಬಾರದೆಂದಿದ್ದರೆ ಒಬ್ಬ ನೌಕರನು ಶಿಸ್ತು ಕ್ರಮವನ್ನು ತೆಗೆದುಕೊಳ್ಳಬೇಕಾಗುವಷ್ಟು ಶಿಸ್ತು ಮೀರಿರದಿದ್ದರೆ ಅವನು ತನ್ನ ಕರ್ತವ್ಯಗಳನ್ನು ತೃಪ್ತಿಕರವಾಗಿ ನಿರ್ವಹಿಸುವಂತೆ ಮತ್ತು ಶಿಸ್ತನ್ನು ಪಾಲಿಸುವಂತೆ ಮಾಡುವ ಬೇರೆ ವಿಧಾನ ಯಾವುದು?

13. **ಸ್ಥಗಿತತೆ:** 10 ಮತ್ತು 15 ವರ್ಷಗಳ ಸೇವೆಯನ್ನು ಪೂರೈಸಿದ ನಂತರ ಕಾಲಬದ್ಧ ವೇತನ ಮುಂಬಡ್ತಿ ಮತ್ತು ಹಿರಿಯ ವೇತನ ಶ್ರೇಣಿ ನಿಯಮದನ್ವಯ 2 ಸ್ವಯಂ ಚಾಲಿತ ವೇತನ ಬಡ್ತಿಯನ್ನು ಪಡೆದಾಗ್ಯೂ ಸಹ ಕೆಲವು ಸೇವೆಗಳಲ್ಲಿ ವೇತನ ಸ್ಥಗಿತ ಸಮಸ್ಯೆ ಉದ್ಭವಿಸುತ್ತಿದೆ. ಚಾಲ್ತಿಯಲ್ಲಿರುವ ವ್ಯವಸ್ಥೆಯಲ್ಲಿ 5 ವಾರ್ಷಿಕ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಲಾಗುತ್ತಿದ್ದು, ಇದು ಪರಿಹಾರ ಒದಗಿಸುತ್ತಿದೆಯೆಂದು ನೀವು ಭಾವಿಸುತ್ತೀರಾ? ಇಲ್ಲದಿದ್ದಲ್ಲಿ, ಈ ವೇತನ ಸ್ಥಗಿತ ಸಮಸ್ಯೆಯನ್ನು ಪರಿಹರಿಸಲು ನೀವು ಯಾವ ಮಾನದಂಡವನ್ನು ಸೂಚಿಸುತ್ತೀರಿ?

14. **ವೇತನ ಶ್ರೇಣಿಯಲ್ಲಿ ಸಮಾನತೆ:** ಸಚಿವಾಲಯ ಸಿಬ್ಬಂದಿ ಮತ್ತು ಕ್ಷೇತ್ರ ಇಲಾಖೆಗಳಲ್ಲಿನ ಸಚಿವಾಲಯೇತರ ಸಿಬ್ಬಂದಿಗಳಲ್ಲಿ ಹೋಲಿಸಬಹುದಾದ/ಸಮಾನ ಹುದ್ದೆಗಳಿಗೆ ಸಮಾನ ವೇತನ ಶ್ರೇಣಿ ನೀಡುವ ಕುರಿತಂತೆ ನಿಮ್ಮ ಅನಿಸಿಕೆಯೇನು?

15. **ವಿಶೇಷ ಭತ್ಯೆ:** ವಿಶೇಷ ಭತ್ಯೆಗಳಿಗೆ ಪರಿಗಣಿಸಿರುವ ಚಾಲ್ತಿಯಲ್ಲಿರುವ ಹುದ್ದೆಗಳು ಸಾಕಷ್ಟಿದೆ ಎಂದು ನೀವು ಭಾವಿಸುತ್ತೀರಾ? ಈ ವಿಶೇಷ ಭತ್ಯೆಯನ್ನು ಮತ್ತಷ್ಟು ಹುದ್ದೆಗಳಿಗೆ ವಿಸ್ತರಿಸುವುದು ಅವಶ್ಯವೆಂದು ನೀವು ಅಭಿಪ್ರಾಯ ಪಡುತ್ತೀರಾ? ಹಾಗಿದ್ದಲ್ಲಿ ಇಂತಹ ಹುದ್ದೆಗಳನ್ನು ಸಮರ್ಥನೆಯೊಂದಿಗೆ ದಯವಿಟ್ಟು ಗುರುತಿಸಿ.

16. **ಆಯ್ಕೆ ದರ್ಜೆಗಳು:** ಕೆಲವು ಇಲಾಖೆಗಳಲ್ಲಿ ಆಯ್ಕೆ ದರ್ಜೆಗಳಿವೆ. ಆಯ್ಕೆ ದರ್ಜೆಗಳ ಮಂಜೂರಾತಿಗೆ ಸಂಬಂಧಿಸಿದ ಎಲ್ಲ ಹುದ್ದೆಗಳಿಗೆ/ ವೃಂದಗಳಿಗೆ ಏಕರೂಪವಾಗಿ ಅನ್ವಯಿಸಬೇಕೆಂದು ಒತ್ತಾಯಪಡಿಸಲಾಗಿದೆ. ಇದು ಒಪ್ಪಿಗೆಯೆಂದಾದರೆ, ಆಯ್ಕೆ ದರ್ಜೆ ಮಂಜೂರಾತಿಗಾಗಿ ನೀವು ಸೂಚಿಸುವ ಮಾನದಂಡ ಯಾವುದು?

## ಭಾಗ–ಸಿ

## ಭತ್ಯೆಗಳು, ಪ್ರಯೋಜನಗಳು, ಸೌಲಭ್ಯಗಳು ಮತ್ತು ಸೌಕರ್ಯಗಳು

1. **(ಎ) ತುಟ್ಟಿಭತ್ಯೆ:** ರಾಜ್ಯ ಸರ್ಕಾರವು ಆಳವಡಿಸಿಕೊಂಡಿರುವ ಕೇಂದ್ರದ ಪ್ರಸಕ್ತ ತುಟ್ಟಿಭತ್ಯೆ ಸೂತ್ರವನ್ನು ಗಮನದಲ್ಲಿಟ್ಟುಕೊಂಡು, ತುಟ್ಟಿಭತ್ಯೆ ಸೂತ್ರವನ್ನು ಪರಿಶೀಲಿಸಿ ಮತ್ತು ನಿರ್ಧರಿಸಿ, ಅಪೇಕ್ಷಣೀಯವಾದ ಮತ್ತು ಕಾರ್ಯಸಾಧ್ಯವಾಗಬಹುದಾದ ಬದಲಾವಣೆಗಳನ್ನು ಆಯೋಗವು ಸೂಚಿಸಬೇಕಾಗಿದೆ.

ಕರ್ನಾಟಕವು ಪ್ರಸಕ್ತ ಅಳವಡಿಸಿಕೊಂಡಿರುವ ತುಟ್ಟಿಭತ್ಯೆ ಸೂತ್ರವು, ಕೇಂದ್ರ 5ನೇ ವೇತನ ಆಯೋಗವು ರೂಪಿಸಿದ ಹಾಗೂ ದಿ:01–01–1996 ರಿಂದ ಜಾರಿಗೆ ಬಂದಿರುವ ಕೇಂದ್ರ ವೇತನ ರಚನೆ ಆಧಾರದ ಮೇರೆಗೆ ಇದೆ ಮತ್ತು ಇದು ಗ್ರಾಹಕ ಬೆಲೆ ಸೂಚ್ಯಂಕ ಮಾಪಕಕ್ಕೆ ಹೊಂದಿಕೊಂಡಿದ್ದು (ಔದ್ಯಮಿಕ ಕೆಲಸಗಾರರ ಸಾಮಾನ್ಯ ಆಧಾರ ವರ್ಷ 1982= 100) 12 ತಿಂಗಳ ಸರಾಸರಿ ಅಖಿಲ ಭಾರತ ಗ್ರಾಹಕ ಬೆಲೆ ಸೂಚ್ಯಂಕ) ಆ ದಿನಾಂಕದಂದು ಈ ಸೂಚ್ಯಂಕವು 306 ಅಂಶಗಳಲ್ಲಿತ್ತು. ಪದೀಯ ವೇತನ ಸಮಿತಿಯು ದಿನಾಂಕ: 1–1–1996 ರಂದು ಇದ್ದ ಈ 306 ಅಂಶಗಳ (1982=100 ಆಧಾರ ವರ್ಷ)ನ್ನು ಆಧರಿಸಿ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಯನ್ನು ರೂಪಿಸಿದೆ. ಮತ್ತು ದಿನಾಂಕ: 01–01–1996ರ ನಂತರ ಉಂಟಾಗುವ ಬೆಲೆ ಹೆಚ್ಚಳಕ್ಕೆ ರಾಜ್ಯ ಸರ್ಕಾರಿ ನೌಕರರಿಗೆ ಪರಿಹಾರ ನೀಡುವ ಸಲುವಾಗಿ, 5ನೇ ಕೇಂದ್ರ ವೇತನ ಆಯೋಗವು ಜಾರಿಗೊಳಿಸಿದ ತುಟ್ಟಿಭತ್ಯೆಯ ಸೂತ್ರವನ್ನೇ ಅಳವಡಿಸಿಕೊಳ್ಳಲು ಶಿಫಾರಸ್ಸು ಮಾಡಿತು. ರಾಜ್ಯ ಸರ್ಕಾರಿ ನೌಕರರಿಗೆ ದಿನಾಂಕ:01–07–2005 ರಿಂದ ಹಾಲಿ ಜಾರಿಯಲ್ಲಿರುವ ತುಟ್ಟಿಭತ್ಯೆಯು ಮೂಲವೇತನದ ಶೇಕಡ 71 ರಷ್ಟಿದೆ.

(ಬಿ) ಇದನ್ನು ಸಂಬಳದ ವಾಸ್ತವಿಕ ವರಮಾನವನ್ನು ಬೆಲೆ ಏರಿಕೆಯಿಂದ ಉಂಟಾಗುವ ಪರಿಣಾಮದಿಂದ ರಕ್ಷಿಸುವ ಪರಿಣಾಮಕಾರಿ ತಂತ್ರವೆಂದು ನೀವು ಭಾವಿಸುತ್ತೀರಾ? ಹಾಗಿಲ್ಲದಿದ್ದಲ್ಲಿ, ಇದರ ಮಾರ್ಪಾಡಿಗೆ ಅವಶ್ಯಕವಿದ್ದಲ್ಲಿ, ಕಾರಣ ಹಾಗೂ ಸಲಹೆಗಳನ್ನು ನೀಡಿರಿ.

(ಸಿ) ಸರಾಸರಿ ಗ್ರಾಹಕ ಬೆಲೆ ಸೂಚ್ಯಂಕವು ನಿಗಧಿತ ಹಂತವನ್ನು ತಲುಪಿದಾಗ ಸ್ವಯಂಚಾಲಿತವಾಗಿ ತುಟ್ಟಿಭತ್ಯೆ ಮಂಜೂರು ಮಾಡಬೇಕೆಂದು ಸೂಚಿಸಲಾಗಿದೆ, ನೀವು ಇದನ್ನು ಒಪ್ಪುವಿರಾ?

2. **(ಎ) ಮನೆ ಬಾಡಿಗೆ ಭತ್ಯೆ (ಮಬಾಭ) ಮತ್ತು ನಗರ ಪರಿಹಾರ ಭತ್ಯೆ (ನಪಭ):** ಮನೆ ಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಗಳ ನೀಡಿಕೆಯ ಈಗಿನ ವಿಧಾನವು, ನೌಕರರ ಮೂಲ ವೇತನ ಮತ್ತು ಜನಸಂಖ್ಯೆಯ ಆಧಾರದ ಮೇಲೆ ನಗರಗಳ/ಇತರ ಸ್ಥಳಗಳ ವರ್ಗೀಕರಣಕ್ಕನುಸಾರವಾಗಿ ಅವರು ಕೆಲಸ ಮಾಡುವ ಸ್ಥಳವನ್ನು ಅವಲಂಬಿಸಿದೆ. ನಗರ/ಪಟ್ಟಣಗಳ ವರ್ಗೀಕರಣ ಮತ್ತು ಲಭ್ಯವಾಗುವ ಮನೆ ಬಾಡಿಗೆ ಭತ್ಯೆ ದರಗಳು ಕೆಳಗಿನಂತಿವೆ.

**ನಗರಗಳ ವರ್ಗೀಕರಣ:**

| ಕ್ರಮ ಸಂಖ್ಯೆ | ನಗರ ಮತ್ತು ಇತರೆ ಸ್ಥಳಗಳ ಜನಸಂಖ್ಯೆ | ವರ್ಗೀಕರಣ |
|---|---|---|
| 1 | 16 ಲಕ್ಷ ಮತ್ತು ಅದಕ್ಕೂ ಹೆಚ್ಚು | ಎ |
| 2 | 8 ಲಕ್ಷ ಮತ್ತು ಅದಕ್ಕೂ ಹೆಚ್ಚು ಆದರೆ 16 ಲಕ್ಷ ಮೀರದಂತೆ | ಬಿ1 |
| 3 | 4 ಲಕ್ಷ ಮತ್ತು ಅದಕ್ಕೂ ಹೆಚ್ಚು ಆದರೆ 8 ಲಕ್ಷ ಮೀರದಂತೆ | ಬಿ2 |
| 4 | 50,000 ಮತ್ತು ಅದಕ್ಕೂ ಹೆಚ್ಚು ಆದರೆ 4 ಲಕ್ಷ ಮೀರದಂತೆ | ಸಿ |
| 5 | 25,000 ಮತ್ತು ಅದಕ್ಕೂ ಹೆಚ್ಚು ಆದರೆ 50,000 ಮೀರದಂತೆ | ಡಿ |
| 6 | ಇತರೆ ಸ್ಥಳಗಳು | ಇ |

**ದಿನಾಂಕ: 01–04–2002 ರಿಂದ ಮನೆಬಾಡಿಗೆ ಭತ್ಯೆ ದರಗಳು ಈ ಕೆಳಗಿನಂತಿವೆ:**

| ನಗರ ಪಟ್ಟಣಗಳ ವರ್ಗೀಕರಣ | ಪರಿಷ್ಕರಿಸಿದ ಮನೆಬಾಡಿಗೆ ಭತ್ಯೆ ದರ |
|---|---|
| ಎ<br>ಬಿ1<br>ಬಿ2 | ಮೂಲ ವೇತನದ ಶೇಕಡ 13 ರಷ್ಟು |
| ಸಿ | ಮೂಲ ವೇತನದ ಶೇಕಡ 7.5 ರಷ್ಟು |
| ಡಿ | ಮೂಲ ವೇತನದ ಶೇಕಡ 5 ರಷ್ಟು |
| ಇ | ಮೂಲ ವೇತನದ ಶೇಕಡ 4 ರಷ್ಟು |

**ನಗರ ಪರಿಹಾರ ಭತ್ಯೆ ರೂ ದರಗಳು ಈ ಕೆಳಗಿನಂತಿವೆ.**

| ವೇತನದ ಹಂತ (ಮೂಲ ವೇತನ) | ವರ್ಗೀಕರಣ ನಗರಗಳಲ್ಲಿ ನಗರ ಪರಿಹಾರ ಭತ್ಯೆಯ ಮೊತ್ತ (ತಿಂಗಳಿಗೆ ರೂ.) | | |
|---|---|---|---|
| | ಎ | ಬಿ1 | ಬಿ2 |
| ಮೂಲ ವೇತನ ತಿಂಗಳಿಗೆ ರೂ. 2500 ರಿಂದ ರೂ. 2650 | 60 | 50 | 40 |
| ಮೂಲ ವೇತನ ತಿಂಗಳಿಗೆ ರೂ. 2651 ರಿಂದ ರೂ. 4249 | 90 | 70 | 40 |
| ಮೂಲ ವೇತನ ತಿಂಗಳಿಗೆ ರೂ. 4250 ರಿಂದ ರೂ. 5450 | 150 | 100 | 40 |
| ಮೂಲ ವೇತನ ತಿಂಗಳಿಗೆ ರೂ. 5451 ಮತ್ತು ಅದಕ್ಕೂ ಹೆಚ್ಚು | 200 | 150 | 40 |

ಹಾಲಿ ಜಾರಿಯಲ್ಲಿರುವ ಮನೆಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆ ದರಗಳು ವಾಸ್ತವಿಕ ಮತ್ತು ಸಮಂಜಸವೆಂದು ನೀವು ಅಭಿಪ್ರಾಯ ಪಡುವಿರಾ? ಹಾಗಿಲ್ಲದಿದ್ದಲ್ಲಿ, ಕಾರಣಗಳ ಸಹಿತ ನೀವು ಪರಿಗಣಿಸುವ ಸಮಂಜಸವಾದ ವರ್ಗೀಕರಣ ಮತ್ತು ದರಗಳನ್ನು ದಯವಿಟ್ಟು ಸೂಚಿಸಿರಿ.

ಬಿ) **ರಜಾ ಪ್ರಯಾಣ ರಿಯಾಯಿತಿ:** ಈಗಿರುವಂತೆ ಸೇವಾವಧಿಯಲ್ಲಿ ಒಂದು ಸಲ ಮಾತ್ರ ಅನುಮತಿಸಲಾಗುವ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯದ ಬಗ್ಗೆ ನಿಮ್ಮ ಅಭಿಪ್ರಾಯವೇನು? ಈಗಿರುವ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯಗಳ ದುರುಪಯೋಗವನ್ನು ತಪ್ಪಿಸುವ ಸಲುವಾಗಿ, ಹಲವು ಖಾಸಗಿ ಸಂಸ್ಥೆಗಳಲ್ಲಿ ಕೊಡುತ್ತಿರುವಂತೆ ಒಂದು ಇಡಿಗಂಟು ಮೊಬಲಗನ್ನು ಸರ್ಕಾರಿ ನೌಕರರಿಗೂ ಕೊಡಬಹುದೆಂದು ಸೂಚಿಸಲಾಗಿದೆ. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?

ಸಿ) **ವೈದ್ಯಕೀಯ ವೆಚ್ಚ ಮರುಪಾವತಿ:** ಖಾಸಗೀ ವೈದ್ಯಕೀಯ ಸಂಸ್ಥೆಗಳು/ಆಸ್ಪತ್ರೆಗಳನ್ನು ಸರ್ಕಾರವು ಮಾನ್ಯ ಮಾಡುತ್ತಾ ಮತ್ತು ಹಲವು ತರಹದ ಖಾಯಿಲೆಗಳಿಗೆ ತಗಲುವ ವೈದ್ಯಕೀಯ ವೆಚ್ಚದ ಮರುಪಾವತಿಯ ದರವನ್ನು ನಿಗಧಿಗೊಳಿಸಿ, ವೈದ್ಯಕೀಯ ವೆಚ್ಚದ ಮರುಪಾವತಿಯ ಸೌಲಭ್ಯವನ್ನು ಸರ್ಕಾರವು ಕಾಲಕಾಲಕ್ಕೆ ಸರಳೀಕರಿಸಿದೆ. ಅಲ್ಲದೇ ಗ್ರೂಪ್–ಸಿ ಮತ್ತು ಗ್ರೂಪ್–ಡಿ ದರ್ಜೆಯ ನೌಕರರಿಗೆ ಮಾಸಿಕ ರೂ.25 ಅನ್ನು ವೈದ್ಯಕೀಯ ಭತ್ಯೆಯಾಗಿ ಮಂಜೂರು ಮಾಡಿದೆ.

ಇದು ಅಗತ್ಯಕ್ಕೆ ತಕ್ಕಂತಿದೆಯೆಂದು ನೀವು ಪರಿಗಣಿಸುವಿರಾ? ಇಲ್ಲದಿದ್ದಲ್ಲಿ ಇದಕ್ಕೆ ಕಾರಣಗಳು ಮತ್ತು ಇದನ್ನು ಸುಧಾರಣೆ ಮಾಡಲು ಸಲಹೆ ನೀಡುವುದು.

ಡಿ) ಈ ಕೆಳಕಂಡ ಭತ್ಯೆಗಳಿಗೆ ಇರುವ ಅರ್ಹತೆಗೆ ಷರತ್ತು ಮತ್ತು ಮೊತ್ತದ ಕುರಿತು ನಿಮ್ಮ ಸಲಹೆ;

1. ವಾಹನ ಭತ್ಯೆ
2. ಯೋಜನಾ ಭತ್ಯೆ
3. ಖಾಸಗಿ ಪ್ರಾಕ್ಟೀಸ್ ಮಾಡದಿರುವ ಬಗ್ಗೆ ಭತ್ಯೆ
4. ಸಮವಸ್ತ್ರ ಭತ್ಯೆ
5. ಗಿರಿ ಭತ್ಯೆ
6. ಅಪಾಯ ಭತ್ಯೆ
7. ಪ್ರಭಾರ ಭತ್ಯೆ
8. ನಿಗಧಿತ ಪ್ರಯಾಣ ಭತ್ಯೆ
9. ಅನ್ಯ ಸೇವೆ ಭತ್ಯೆ

ಇ) (1) ವರ್ಗಾವಣೆಯಾದ ಒಬ್ಬ ನೌಕರನಿಗೆ ಮಂಜೂರು ಮಾಡುವ ಈಗಿರುವ ವರ್ಗಾವಣೆ ಅನುದಾನ ಮತ್ತು ಸಾಮಾನು ಸರಂಜಾಮು ಸಾಗಣೆ ಭತ್ಯೆಗಳ ಬಗ್ಗೆ ನಿಮ್ಮ ಅಭಿಪ್ರಾಯಗಳೇನು?

(2) ಪ್ರವಾಸದ ಪ್ರಯಾಣ ಭತ್ಯೆ ಮತ್ತು ದಿನ ಭತ್ಯೆಗಳ ದರಗಳನ್ನು ಮಾರ್ಪಡಿಸುವ ಅಗತ್ಯವಿದೆಯೆಂದು ನೀವು ಭಾವಿಸುವಿರಾ? ಹೌದಾದಲ್ಲಿ ಸೂಕ್ತ ಭತ್ಯೆ ಎಷ್ಟೆಂದು ನೀವು ಸೂಚಿಸುತ್ತೀರಿ?

ಎಫ್) **ಸೌಲಭ್ಯಗಳು ಮತ್ತು ಪ್ರೋತ್ಸಾಹಗಳು:** ನಿಮ್ಮ ದೃಷ್ಟಿಯಲ್ಲಿ ಯಾವ ಸೌಲಭ್ಯಗಳು, ಪ್ರೋತ್ಸಾಹ ಹಾಗೂ ಇತರ ಕಲ್ಯಾಣ ಯೋಜನೆಗಳು ಸರ್ಕಾರಿ ಸೇವೆಯಲ್ಲಿ ದಕ್ಷತೆ ಹಾಗೂ ಉಪಯುಕ್ತ ಕಾರ್ಯಗಳಿಗೆ ಅನುಕೂಲಕರವಾಗಿದೆ?

1. ಕ್ಯಾಂಟೀನ್ ಸೌಲಭ್ಯ
2. ರಜೆ ಸೌಲಭ್ಯಗಳು ಮತ್ತು ಎರಡು ವರ್ಷಗಳ ಬ್ಲಾಕ್ ಅವಧಿಯಲ್ಲಿ ಮತ್ತು ನಿವೃತ್ತಿ ಸಂದರ್ಭದಲ್ಲಿ ಗಳಿಕೆ ರಜೆ ನಗಧೀಕರಣ ಸೌಲಭ್ಯ.
3. ಬೈಸಿಕಲ್, ಮೋಟಾರು ವಾಹನ, ಗೃಹ ನಿರ್ಮಾಣ, ಗೃಹ ರಿಪೇರಿ ಮುಂಗಡ ಇತ್ಯಾದಿ
4. ಅಂಧ ಮತ್ತು ಅಂಗವಿಕಲ ನೌಕರರಿಗೆ ಈಗ ನೀಡಲಾಗುತ್ತಿರುವ ಮಾಹೆಯಾನ ರೂ. 200/– ವಾಹನ ಭತ್ಯೆ.

ಜಿ) ಸರ್ಕಾರಿ ಸೇವೆಯಲ್ಲಿ ಹಾಲಿ ಜಾರಿಯಲ್ಲಿರುವ ಕೆಲಸದ ಅವಧಿ ಮತ್ತು ಸಾರ್ವಜನಿಕ ರಜಾ ದಿನಗಳ ಬಗ್ಗೆ ನಿಮ್ಮ ದೃಷ್ಟಿಕೋನವೇನು?

ಹೆಚ್) ಸರ್ಕಾರಿ ನೌಕರರ ಕಾರ್ಯ ನಿರ್ವಹಣೆ ಕುರಿತ ವಿಮರ್ಶೆ ಹಾಗೂ ಸರ್ಕಾರಿ ನೌಕರರ ಹೊಣೆಗಾರಿಕೆ ಕುರಿತು ನಿಮ್ಮ ಸಲಹೆಗಳೇನಾದರೂ ಇದೆಯೇ?

## ಭಾಗ–ಡಿ
## ಮರಣ ಹಾಗೂ ನಿವೃತ್ತಿ ಸೌಲಭ್ಯಗಳು

1 (ಎ) **ನಿವೃತ್ತಿ ವಯಸ್ಸು:** ಸರ್ಕಾರಿ ನೌಕರರ ಈಗಿರುವ ನಿವೃತ್ತಿ ವಯಸ್ಸು 58 ವರ್ಷಗಳು. ಇದನ್ನು ಬದಲಾಯಿಸಬೇಕೆಂದು ನೀವು ಬಯಸುವಿರಾ? ಹಾಗಿದ್ದಲ್ಲಿ ಕಾರಣಗಳನ್ನು ನೀಡಿರಿ.

(ಬಿ) (1) **ಸ್ವ–ಇಚ್ಛಾ ನಿವೃತ್ತಿ:** ಸ್ವ–ಇಚ್ಛಾ ನಿವೃತ್ತಿಗೆ ಸಂಬಂಧಪಟ್ಟ ಉಪಬಂಧದ ಬಗ್ಗೆ ನಿಮ್ಮ ಅಭಿಪ್ರಾಯವೇನು?

(2) ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳ ಆಧಾರದ ಮೇಲೆ ಸರ್ಕಾರವು ದಿನಾಂಕ:01–09–2003ರ ತನ್ನ ಆದೇಶ ಸಂಖ್ಯೆ: ಡಿಪಿಎಆರ್ 15 ಎಫ್‌ಡಿಇ 2003ರಲ್ಲಿ ಸ್ವ–ಇಚ್ಛಾ ನಿವೃತ್ತಿ ಯೋಜನೆಯನ್ನು ಹೆಚ್ಚುವರಿಯಾಗಿ ಇರುವ ಸಿಬ್ಬಂದಿಗೆ ಜಾರಿಗೆ ತಂದಿದೆ. ಈ ಕುರಿತು ತಮ್ಮ ಅಭಿಪ್ರಾಯವೇನು? ಇದನ್ನು ಮಾರ್ಪಾಟು ಮಾಡುವ ಅಗತ್ಯವಿದೆಯೆ?

(ಸಿ) (1) **ನಿವೃತ್ತಿ ಸೌಲಭ್ಯಗಳು:** ಪ್ರಸ್ತುತ, 33 ವರ್ಷಗಳ ಅರ್ಹತಾ ಸೇವೆಯನ್ನು ಪೂರ್ಣಗೊಳಿಸಿದ ಸರ್ಕಾರಿ ನೌಕರರಿಗೆ ಮಾತ್ರ ಪೂರ್ಣ ನಿವೃತ್ತಿ ವೇತನ ಸಂದಾಯವಾಗುತ್ತದೆ. ಹೀಗೆ ನಿಗದಿಪಡಿಸಿರುವುದು ನಿಮಗೆ ಸಮ್ಮತವೇ?

(2) ಒಬ್ಬ ಉದ್ಯೋಗಿಗೆ ಸಂದಾಯವಾಗುವ ಕನಿಷ್ಠ ನಿವೃತ್ತಿ ವೇತನ ಮಾಸಿಕವಾಗಿ ರೂ.1055/–(ತುಟ್ಟಿ ಭತ್ಯೆಯನ್ನು ಹೊರತುಪಡಿಸಿ) ಇದು ಬದಲಾಗಬೇಕೇ? ಹಾಗಿದ್ದರೆ ಎಷ್ಟು?

(3) ನಿವೃತ್ತಿ ವೇತನವನ್ನು ಲೆಕ್ಕ ಹಾಕುವ ಉದ್ದೇಶಕ್ಕಾಗಿ, ನಿವೃತ್ತಿಯ ಹಿಂದಿನ 10 ತಿಂಗಳಲ್ಲಿ ಪಡೆದ ಸರಾಸರಿ ವೇತನದ ಶೇಕಡ 50ರಷ್ಟನ್ನು ದಿನಾಂಕ:01–09–2003 ರಿಂದ ಪರಿಗಣನೆಗೆ ತೆಗೆದುಕೊಳ್ಳಲಾಗುತ್ತಿದೆ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು? ಬದಲಾವಣೆಗೆ ಏನಾದರೂ ಸಲಹೆ ನೀಡುವಿರಾ?

(4) ನಿವೃತ್ತಿಯ ಉಪದಾನವನ್ನು ಲೆಕ್ಕ ಹಾಕುವಾಗ ಮೂಲ ವೇತನವನ್ನಷ್ಟೇ ಲೆಕ್ಕಕ್ಕೆ ತೆಗೆದುಕೊಳ್ಳಲಾಗುತ್ತದೆ. ಇದರ ಮಾರ್ಪಾಟಿಗೆ ಏನಾದರೂ ಸಲಹೆ ನೀಡುವಿರಾ? ಈ ಮಾರ್ಪಾಡಿಗೆ ಕಾರಣಗಳನ್ನು ನೀಡುವುದು.

(5) ಈಗ ಲಭ್ಯವಿರುವ ಕನಿಷ್ಠ ಕುಟುಂಬ ವಿಶ್ರಾಂತಿ ವೇತನದ ಮೊಬಲಗು ರೂ.1055/– ರೂಪಾಯಿಗಳು ಹಾಗೂ ಗರಿಷ್ಠ ರೂ.3,381/– ರೂಪಾಯಿಗಳು, ಇದು ತಕ್ಕುದಾಗಿದೆಯೆಂದು ಭಾವಿಸುವಿರಾ? ಇಲ್ಲವಾದಲ್ಲಿ ಕುಟುಂಬ ವಿಶ್ರಾಂತಿ ವೇತನದ ಕನಿಷ್ಠ ಮತ್ತು ಗರಿಷ್ಠ ಮೊಬಲಗು ಎಷ್ಟಿರಬೇಕು?

(6) ನಿವೃತ್ತಿದಾರರಿಗೆ ನೀಡುವುದು ಯುಕ್ತವೆಂದು ನೀವು ಪರಿಗಣಿಸುವ ಇತರ ಸಹ–ಸೌಲಭ್ಯಗಳಾವುವು?

**(ಡಿ) ನಿವೃತ್ತಿ ವೇತನದ ಪರಿವರ್ತನೆ:**

(1) ನಿವೃತ್ತಿ ವೇತನದ ಗರಿಷ್ಠ 1/3 ಭಾಗವನ್ನು ಹಾಲೀ ಪರಿವರ್ತನೆಗೊಳಿಸಬಹುದಾಗಿದೆ. ಇದರ ಮಾರ್ಪಾಟಿಗೆ ಸಲಹೆ ಏನಾದರೂ ನೀಡುವಿರಾ?

(2) ನಿವೃತ್ತಿದಾರನಿಗೆ, ಈಗಿರುವಂತೆ 15 ವರ್ಷಗಳಿಗೆ ಬದಲಾಗಿ 12 ವರ್ಷಗಳ ಅವಧಿ ಮುಕ್ತಾಯವಾದ ತರುವಾಯ ನಿವೃತ್ತಿ ವೇತನದ ಪರಿವರ್ತಿತ ಮೌಲ್ಯವನ್ನು ನಿವೃತ್ತಿ ವೇತನದೊಂದಿಗೆ ಪುನ: ಸೇರಿಸಿ ಕೊಡಬೇಕೆಂದು ಸೂಚಿಸಲಾಗಿದೆ ಮತ್ತು 3ನೇ ವೇತನ ಆಯೋಗವು ಇದೇ ರೀತಿ ಶಿಫಾರಸ್ಸು ಮಾಡಿತ್ತು. ಪರಿವರ್ತನೆಯ ಕೋಷ್ಟಕವನ್ನು ಸಿದ್ಧಪಡಿಸುವಾಗ ಪರಿವರ್ತನೆಯ ದರ ಹಾಗೂ ನಿವೃತ್ತಿದಾರರ ಸಂಭಾವ್ಯ ಆಯುರ್ಮಾನವನ್ನು ಗಣನೆಗೆ ತೆಗೆದುಕೊಳ್ಳಲಾಗಿದೆಯೆಂದು ಹೇಳಲಾಗಿದೆ. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?

**(ಇ) ಸಮೂಹ ವಿಮಾ ಯೋಜನೆ:** ಸರ್ಕಾರಿ ನೌಕರರಿಗೆ ಅನ್ವಯಿಸುವ ಪ್ರಸಕ್ತ ಸಮೂಹ ವಿಮಾ ಯೋಜನೆಯನ್ನು ಇನ್ನಷ್ಟು ಸುಧಾರಣೆ ಮಾಡಲು ನಿಮ್ಮ ಸಲಹೆಗಳೇನಾದರೂ ಇದೆಯೇ?

**ಭಾಗ–ಇ**

**ಮಹಿಳಾ ಉದ್ಯೋಗಿಗಳು**

1. ಪ್ರಸ್ತುತ ಜಾರಿಯಲ್ಲಿರುವ ಸೇವಾ ಪರಿಸ್ಥಿತಿಯು ಮಹಿಳಾ ಉದ್ಯೋಗಿಗಳ ವಿಶೇಷ ಸಮಸ್ಯೆಗಳ ಕುರಿತು ಸಾಕಷ್ಟು ಗಮನ ನೀಡಿದೆ ಎಂದು ತಾವು ಅಭಿಪ್ರಾಯ ಪಡುವಿರಾ? ಇಲ್ಲವಾದಲ್ಲಿ, ಪರಿಸ್ಥಿತಿಯ ಸುಧಾರಣೆಗೆ ನಿಮ್ಮ ಸಲಹೆಗಳೇನು?

2. **ಸಂಬಂಧಪಟ್ಟ ವಿಷಯ:** ಮೇಲ್ಕಂಡ ಪ್ರಶ್ನೆಗಳಲ್ಲಿ ಒಳಗೊಳ್ಳದಿರುವ ಹಾಗೂ ಆಯೋಗಕ್ಕೆ ವಹಿಸಲಾದ ಪರಿಶೀಲನಾ ಅಂಶಗಳಿಗೆ ಪ್ರಸ್ತುತವೆನಿಸುವ ಇತರೆ ಯಾವುದೇ ವಿಷಯಗಳ ಮೇಲೆ ನೀವು ಯಾವುದೇ ಸಲಹೆಗಳನ್ನು ನೀಡಲು ಇಚ್ಛಿಸಿದಲ್ಲಿ ತಮ್ಮ ಸಲಹೆಗಳನ್ನು **"ಸಂಬಂಧಪಟ್ಟ ವಿಷಯಗಳ ಮೇಲಿನ ಸಲಹೆಗಳು"** ಎಂಬ ಶೀರ್ಷಿಕೆಯಡಿಯಲ್ಲಿ ದಯವಿಟ್ಟು ಪ್ರತ್ಯೇಕವಾಗಿ ಸೂಚಿಸಿರಿ.

## KARNATAKA STATE FIFTH PAY COMMISSION
## GENERAL QUESTIONNAIRE
## PART-A
## GENERAL PRINCIPLES

***Introductory Paragraph***:

1. The principles generally considered by the earlier State Pay Commissions to evolve new pay structure / Pay scales of Government employees are broadly indicated below.
    1. Qualification required;
    2. Training;
    3. Degree of responsibility;
    4. Area of jurisdiction;
    5. Occupational hazards;
    6. Level of decision-making;
    7. Avenues of Promotion available;
    8. Horizontal and Vertical relativity in similar jobs in other departments;
    9. Certain statutory and constitutional constraints governing recruitment and promotion of officers.
    10. Historical relativities in pay scales evolved over a period of time.

In your considered opinion do you consider them as relevant in the present complex situation arising out of global phenomenon of liberalization, privatization and out sourcing of government activities/services. If not please suggest the factors that in your opinion are relevant.

2. In your considered opinion what measures you expect from Government;
    i) To improve the efficiency of Government employees,
    ii) To make Government employees to be more people friendly,
    iii) To make Government employees to be more responsive to people's aspirations,
    iv) To inculcate a sense of commitment among Government employees about devotion to duty.
3. The fundamental objectives of government comprises;
    a) Maintenance of law and order,
    b) Providing of basic social services and infrastructure,
    c) Protecting the vulnerable sections of the society,
    d) Protecting the environment,

To achieve these objectives, Government have employed nearly 5.32 Lakhs employees in Government departments at various levels in the entire State. Of the 5.32 Lakhs Employees, 80% are employed in Police, Health, Education, Rural Development, Irrigation, Agriculture and Social Welfare Sectors and they are primarily responsible for achieving the fundamental objectives of the Government. Taking this into consideration, do you consider the expenditure of Government during 2004-05 on salaries of State Government employees which is about 15.82 percentage of the total expenditure is on higher side? In your opinion what should be the optimum percentage of the total expenditure of the State, should the Government incur on salaries of Government employees? If you have any other suggestions regarding proportion of salary expenditure to total State expenditure, they may please be given with reasons.

4. Do you have any other specific suggestions for effecting economy in Government expenditure so that the net effect of increased emoluments for Government employees may be kept within reasonable limits?

5. The Commission is required to consider the existing pay scales in neighbouring States as well as Central Government. In your opinion whether such comparison is reasonable and how far parity could be considered at comparable levels in terms of pay scales and allowances? Please give reasons.

6. There is generally a feeling that Government employees have minimum promotional opportunities in their career. In your opinion, how many promotional opportunities should a Government servant have in his career? And what should be a reasonable monetary benefit that could be given on promotion. At present a Government employee is entitled to have a single increment on his promotion (which generally ranges from Rs.100 to 500 per month depending upon the category of employee).

7. Do you agree that the pay system should encourage better management in Civil Service while improving the reasonable aspirations of the employees for fair treatment, with a view to retaining them in service and motivating them to perform their duties efficiently and honestly?

**PART-B**

**PAY SCALES**

1. The existing pay scales are listed at Annexure-B. These scales have been evolved at the index level of 1510 points (AIACPI level) (306 points Base 1982=100) by merging the Dearness Allowance at the same index level obtainable on 01-01-1996. These scales are effective from 01-04-1998.

2. Due to rationalization of pay scales over a period of time, the number of pay scales presently in force are 20 (as in Annexure-B). Do you feel that the number of scales are adequate? If not, give reasons.

3. What is your opinion in regard to master scale adapted by the State Government since 01-07-1986 and the 20 standard scales segmented out of this master scale. Do you consider this as advantageous? If not, please give your comments and suggestions in this regard?

4. The existing pay structure for Government Employees is determined with reference to the 12 monthly average consumer price index at 1510 AIACPI index points (306 points Base 1982=100) obtainable on 01-01-1996. In your view what should be the AIACPI reference point to determine the new pay structure?

5 (a) The existing total minimum emoluments paid to Group-D employee in Bangalore is Rs. 4, 560/- p.m., (including Pay+DA+HRA+CCA). Do you consider this adequate, keeping in view the current cost of living situation? If not, in your view what should be the minimum emoluments and what principles would you suggest for determination of such minimum emoluments?

(b) The existing total maximum emoluments paid to highest class of Government Servant in Bangalore is Rs.34,645/- p.m., (Pay+DA+HRA+CCA). Do you consider this adequate, keeping in view in the current cost of living situation? If not, in your view what should be the maximum emoluments and what principles would you suggest for determination of such maximum emoluments?

6. The present disparity ratio between the minimum pay in the lowest scale and the minimum pay in the highest scale is 1:7.2. The disparity ratio between the maximum in the lowest scale and the maximum in the highest scale is 1:6. What in your opinion would be the reasonable disparity ratio in regard to these, also keeping in view the present tax structure?

7. Do you feel that the existing relativity among the different scales of pay is commensurate with the responsibilities attached to each level? If changes are called for, supporting reasons may also be given?

8. On the concept of "equal pay for equal work ", do you consider it possible to establish equivalence of work by different levels among several departments within the State Government or between the departments of State and of Central Government?

(a) A view is projected that employees in any particular cadre possessing qualifications higher than the minimum prescribed for that post or higher than the qualification of their other colleagues should be paid higher emoluments in recognition of such qualifications. The other school of thought is that any such higher remuneration would conflict with the concept of equal pay for equal work. What are your views?

9. Do you feel that the number of hierarchical levels available in all the cadres of departments should be uniform for all departments/Services/cadres. What are your views in this regard?

**INCREMENTS:**

10. What, according to you, should be the minimum increment rate and what should be the relation between increments within any scale or between two scales?

11. For purposes of fitment into revised scales of pay, sometimes " bunching" at different stages occur. One view is that, even with such bunching, persons at a higher stage do get adequate benefits on such fitment. Do you agree? What formula would you suggest for fitment into revised pay scales?

